# 'ಬ್ಯಾರಿ ಸಮುದಾಯ – ಒಂದು ಚಾರಿತ್ರಿಕ ಅವಲೋಕನ'

ಹಂಪಿ ಕನ್ನಡ ವಿಶ್ವವಿದ್ಯಾನಿಲಯ ಎಂ.ಫಿಲ್ ಪದವಿ

(ಸಮಾಜ ವಿಜ್ಞಾನ ನಿಕಾಯ) ಗಾಗಿ ಸಲ್ಲಿಸುತ್ತಿರುವ ಮಹಾ ಪ್ರಬಂಧ

ಸಂಶೋಧಕ

ಇಸಾಕ್

ನೋಂದಾಣಿ ಸಂಖ್ಯೆ : 151107030053

ಮಾರ್ಗದರ್ಶಕರು

ಡಾ. ಸತೀಶ್ ಕುಮಾರ್ ಶೆಟ್ಟಿ ಪಿ.



೨೦೧೭

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತ ಕೇಂದ್ರ ಬಲ್ಮಠ, ಮಂಗಳೂರು ೫೭೫ ೦೦೧

# 'ಬ್ಯಾರಿ ಸಮುದಾಯ – ಒಂದು ಚಾರಿತ್ರಿಕ ಅವಲೋಕನ'



ಹಂಪಿ ಕನ್ನಡ ವಿಶ್ವವಿದ್ಯಾನಿಲಯ ಎಂ.ಫಿಲ್ ಪದವಿ
(ಸಮಾಜ ವಿಜ್ಞಾನ ನಿಕಾಯ) ಗಾಗಿ ಸಲ್ಲಿಸುತ್ತಿರುವ ಮಹಾ ಪ್ರಬಂಧ

**ಸಂಶೋಧಕ**

ಇಸಾಕ್

ನೋಂದಣಿ ಸಂಖ್ಯೆ : 151107030053

**ಮಾರ್ಗದರ್ಶಕರು**

ಡಾ. ಸತೀಶ್ ಕುಮಾರ್ ಶೆಟ್ಟಿ ಪಿ.

**೨೦೧೩**

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತ ಕೇಂದ್ರ ಬಲ್ಮಠ, ಮಂಗಳೂರು ೫೭೫ ೦೦೧

<u>ಪ್ರಮಾಣ ಪತ್ರ</u>

ಹಂಪಿ ಕನ್ನಡ ವಿಶ್ವ ವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ "ಬ್ಯಾರಿ ಸಮುದಾಯ – ಒಂದು ಚಾರಿತ್ರಿಕ ಅವಲೋಕನ' ಶೀರ್ಷಿಕೆಯ ಮಹಾ ಪ್ರಬಂಧವು ಈ ಸಂಶೋಧಕನ ಸ್ವತಂತ್ರ ಕೃತಿಯಾಗಿದ್ದು, ಕ್ಷೇತ್ರ ಕಾರ್ಯ, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನೆ ಕೇಂದ್ರದಲ್ಲಿ ಡಾ. ಸತೀಶ್ ಕುಮಾರ್ ಶೆಟ್ಟಿ ಪಿ. ರವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ ಈ ಮಹಾ ಪ್ರಬಂಧವು ಬೇರೆ ಯಾವುದೇ ಪದವಿ , ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ಇಸಾಕ್

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ,

ಬಲ್ಮಠ, ಮಂಗಳೂರು 575 001

ದಿನಾಂಕ : 29-8-16

# ಯೋಗ್ಯತಾ ಪತ್ರ

ಇಸಾಕ್ ರವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ 'ಬ್ಯಾರಿ ಸಮುದಾಯ – ಒಂದು ಚಾರಿತ್ರಿಕ ಅವಲೋಕನ' ಎಂಬ ಶೀರ್ಷಿಕೆಯ ಈ ಮಹಾ ಪ್ರಭಂದವನ್ನು ಎಂ.ಫಿಲ್. ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವ ವಿದ್ಯಾನಿಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಮಹಾ ಪ್ರಬಂಧವು ಸಂಶೋಧಕರ ಸ್ವಂತ ಕ್ಷೇತ್ರ ಕಾರ್ಯ, ಅಭಿಪ್ರಾಯ ಸಂಗ್ರಹ, ಸಂದರ್ಶನ, ಬೋಧನೆ ಮತ್ತು ಸಂಶೋಧನೆಯ ಫಲ ಸ್ವರೂಪವಾಗಿದೆ. ಇವರು ಈ ಮಹಾ ಪ್ರಬಂಧ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ.

29/8/16

ಡಾ. ಸತೀಶ್ ಕುಮಾರ್ ಶೆಟ್ಟಿ ಪಿ.
ಸಂಶೋಧನ ಮಾರ್ಗದರ್ಶಕರು

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ,
ಬಲ್ಮಠ, ಮಂಗಳೂರು 575 001
ದಿನಾಂಕ :

## ವಿಷಯಸೂಚಿ

ಪುಟಗಳು

## ಪ್ರಸ್ತಾವನೆ

ಪ್ರಪಂಚದಲ್ಲಿರುವ ಪ್ರಮುಖ ಧರ್ಮಗಳಲ್ಲಿ ಒಂದಾದ ಇಸ್ಲಾಂ ಧರ್ಮ ಶಾಂತಿ, ಸಮಾನತೆ ಮತ್ತು ಸಹೋದರತೆಯ ಸಂದೇಶವನ್ನು ಪ್ರಪಂಚಕ್ಕೆ ಬೋದಿಸಿದೆವೆನ್ನುವದರಲ್ಲಿ ಸಂದೇಹವಿಲ್ಲ ಜಗತ್ತಿನ ಸಂಸ್ಕೃತಿ ಪರಂಪರೆ ಮತ್ತು ನಾಗರೀಕ ಮೌಲ್ಯಗಳಿಗೆ ಇಸ್ಲಾಂ ಅಪಾರ ಕೊಡುಗೆಯನ್ನು ನೀಡಿದೆ. 7ನೇ ಶತಮಾನದಲ್ಲಿ ಪೈಗಂಬರ್ ಮಹಮ್ಮದ್ (ಸ.ಅ) ರವರು ಇಸ್ಲಾಂ ಸಂದೇಶವನ್ನು ಅರೇಬಿಯಾದಲ್ಲಿ ಮತ್ತು ಜಗತ್ತಿಗೆ ಬಿತ್ತುವ ಮೊದಲೇ ಅರೇಬಿಯಾ ಭಾರತದೊಂದಿಗೆ ವ್ಯಾಪಾರ ವಾಣಿಜ್ಯ ಸಂಪರ್ಕ ಹಾಗೂ ಸಾಗರ ವ್ಯಾಪಾರ ವಹಿವಾಟು ನಡೆಯುತ್ತಿದ್ದವೆನ್ನುದಕ್ಕೆ ಇತಿಹಾಸಿಕ ದಾಖಲೆಗಳು ವಿಪುಲವಾಗಿ ಲಭ್ಯವಿದೆ.

ಅರಬರು ಭಾರತದ ಕರಾವಳಿಯ ಅತೀ ಮುಖ್ಯ ವರ್ತಕರು ಆಗಿದ್ದರು. ಪಶ್ಚಿಮ ಕರಾವಳಿಯ ಜಲಭಾಗ ಅರಬಿ ಸಮುದ್ರವೆಂದು ಕರೆಯಲ್ಪಟ್ಟಿದೆ ಹೀಗೆ 7ನೇ ಶತಮಾನದಲ್ಲಿ ಇಸ್ಲಾಂನ ಪುನರ್ ಜನ್ಮದೊಂದಿಗೆ ಅರಬರು ಜಗತ್ತಿನ ರಾಜಕೀಯ ಮತ್ತು ಧಾರ್ಮಿಕ ಶಕ್ತಿಯ ದ್ರುವತಾರೆಗಳಾದರು ಕೇವಲ ಕೆಲವೇ ವರ್ಷದಲ್ಲಿ ಅರಬ್ ಸಾಮ್ರಾಜ್ಯ ಪ್ರಪಂಚದ ನಾನಾ ಭಾಗಕ್ಕೆ ವಿಸ್ತರಿಸಲ್ಪಟ್ಟಿತ್ತು. 8ನೇ ಶತಮಾನದಲ್ಲಿ ಭಾರತದ ಮುಲ್ತಾನ್ ಮತ್ತು ಸಿಂದ್ ಪ್ರಾಂತ್ಯವು ಅರಬ್ ಸಾಮ್ರಾಜ್ಯದಲ್ಲಿ ವಿಲನವಾಯಿತು. ಇಸ್ಲಾಂನ ಆಗಮನದೊಂದಿಗೆ ಜಾಗತಿಕ ಮಟ್ಟದಲ್ಲಿ ಇಸ್ಲಾಂ ಸಾಗರ ವಾಣಿಜ್ಯದ ಭಾಗವಾಯಿತು, ಮಾತ್ರವಲ್ಲದೆ ಇಸ್ಲಾಂ ಧರ್ಮದ ಅವತರಣ ಜಾಗತಿಕ ಸಾಗರ ಉದ್ಯಮಕ್ಕೆ ಒಂದು ಹೊಸ ತಿರುವು ಮತ್ತು ದಿಕ್ಕನ್ನು ತೋರಿಸಿತ್ತು. 10ನೇ ಶತಮಾನದಲ್ಲಿ ಮಧ್ಯ ಎಷ್ಯಾದಿಂದ ಬಂದ ಅರಬ್ ಸಾಮ್ರಾಜ್ಯದ ಸೇನಾಧಿಪತಿಗಳು, ವಾಳೇಯ ಗಾರರು ಭಾರತದ ಮೇಲೆ ದಂಡೆತ್ತಿ ಬಂದು ಅರಬ್ ಸಾಮ್ರಾಜ್ಯ ಸ್ಥಾಪಿಸಲು ಪ್ರಾರಂಭಿಸಿದರು.1

ದಕ್ಷಿಣ ಕನ್ನಡ ಕರಾವಳಿ ಪ್ರದೇಶದಲ್ಲಿ ಪ್ರಮುಖ ವಿದೇಶಿ ವರ್ತಕರು ಅರಬ್ಬರಾಗಿದ್ದರು. ಪಶ್ಚಿಮದ ಕಡಲನ್ನು ಅರಬ್ಬಿ ಸಮುದ್ರವೆಂದು ಕರೆದರು ಸುಮಾರು 3000 ವರ್ಷಗಳಿಂದಲು ಭಾರತೀಯರು ಪೋನೇಶಿಯನರು, ಅರಬರು ಮತ್ತು ಜಗತ್ತಿನ ಎಲ್ಲಾ ಸಾಗರ ವ್ಯಾಪಾರಿಗಳಿಗೆ ಈ ಸಮುದ್ರ ಪ್ರಮುಖ ಜ ಲಮಾರ್ಗವಾಗಿತ್ತು. ಕ್ರಿ.ಶ 4ನೇ ಮತ್ತು 5ನೇ ಶತಮಾನದಲ್ಲಿ ದಕ್ಷಿಣ ಕನ್ನಡದೊಂದಿಗೆ ಅರಬರ ವ್ಯಾಪಾರ ಸಂಬಂಧದ ಬಗ್ಗೆ ಹಲವಾರು ದಾಖಲೆಗಳಿವೆ. ಪರ್ಶಿಯಾದ ಕುದುರೆಗಳನ್ನು ಶ್ರೀಲಂಕಾಕ್ಕೆ ತರುತ್ತಿದ್ದಾಗ ಆ ವ್ಯಾಪಾರರು ಪಶ್ಚಿಮ ಕರಾವಳಿಯವರೆಗೂ ಹಬ್ಬಿಕೊಂಡಿತ್ತೆಂಬುದನ್ನು "ಕೊಸ್ಮೋಸ್ ಇಂಡಿಕೋ ಬಸ್ತ್" ವೆಂಬ 6ನೇ ಶತಮಾನದ ಗ್ರಂಥದಲ್ಲಿ ಉಲೇಖಿಸಲಾಗಿದೆ.2

ಹಿಜರಿಶಕ 22 ಅಥವಾ ಕ್ರಿ.ಶ. 644 ರಲ್ಲಿ ಇಬ್ನ್ ಹಬೀದ್ ಮಂಗಳೂರು ಮತು ಕಾಸರಗೋಡಿನಲ್ಲಿ ಮಸೀದಿಯನ್ನು ನಿರ್ಮಿಸಿದ ಬಗ್ಗೆ ಕೇರಳದ ಇತಿಹಾಸಕಾರರಾದ ಗೋಪಾಲನ್ ನಾಯರ್ ರವರ "ಮಾಪಿಳ್ಳಾಸ್ ಆಫ್ ಮಲಬಾರ್" ಎಂಬ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ.

ತುಳುನಾಡಿನಲ್ಲಿ ಆಳುಪರ ಆಳ್ವಿಕೆಗಳಗಿಂತಲೂ ಮುಂಚೆ ಅರಬರು ವಾಸ್ತವವಿದ್ದರು ಆದರೆ ಇಲ್ಲಿ ಇಸ್ಲಾಂನ ಆಗಮನ ಬಗ್ಗೆ ಸ್ಪಷ್ಟವಾಗಿ ದಾಖಲಿಸಲು ಸಾಧ್ಯವಿಲ್ಲ. ಜನಪದಗಳ ಆಧಾರದಲ್ಲಿ ಪಶ್ಚಿಮ ಕರಾವಳಿಯ ಮುಸ್ಲಿಂ ರು 7ನೇ ಶತಮಾನರ ಮಧ್ಯ ಭಾಗದಲ್ಲಿ ಅರಬೀ ವರ್ತಕರ ರೂಪದಲ್ಲಿ ಜೀವನ ನಡೆಸುತ್ತಿದರು. ಹಾಗೆಯೇ ಅರಬ್ ಪ್ರವಾಸಿಗರ ಈ ಪ್ರದೇಶವು ಹವಾಮಾನ ಮತ್ತು ವ್ಯಾಪಾರಕ್ಕೆ ಅನೂಕೂಲವೆಂದು ತಿಳಿಸಿ ಇಲ್ಲಿ ಇಸ್ಲಾಂ ಮತ ಶಾಂತ ರೀತಿಯಲ್ಲಿ ಪ್ರಸಾರವಾಗುತ್ತಿತೆಂದು ಸೂಚಿಸಿದರ ಬಗ್ಗೆ ಉಲ್ಲೇಖವಿದೆ.3

ಕ್ರಿ.ಶ. 1175 ರಲ್ಲಿ ತುಳುನಾಡಿಗೆ ಆಗಮಿಸಿದ 'ಇದ್ರಾನ್ ಮಸೂದಿವೆಂಬ ಮುಸ್ಲಿಂ ಪ್ರವಾಸಿಗ ಮಂಗಳೂರಿಗೆ ಭೇಟಿ ನೀಡಿ ಇಲ್ಲಿ 4000 ಮುಸ್ಲಿಂ ರು ಇರುದಾಗಿಯೂ ಇಲ್ಲಿನ ಹಿಂದೂಗಳು ಮುಸ್ಲಿಂ ರನ್ನು ಸಹೋದರರರಂತೆ ನೋಡಿಕೊಳ್ಳುತ್ತಿದ್ದರು ಎಂದು ದಾಖಲಿಸಿದ್ದಾರೆ. ಅಂದು ಮುಸ್ಲಿಂಮರು ಮುಖ್ಯ ವ್ಯಾಪಾರಿಗಳಾಗಿ ತುಳು ಸಮುದಾಯದ ಭಾಗವಾಗಿದ್ದರೆಂದು ಈ ದಾಖಲೆಯು ಮಾಹಿತಿಯನ್ನು ನೀಡುತ್ತದೆ. ಅದೇ ರೀತಿ 7ನೇ ಶತಮಾನದ ಅರಬೀ ದಾಖಲೆಯೊಂದರಲ್ಲಿ ತುಳುನಾಡಿನ ಬಂದರುಗಳಾದ ಸಿಂಧಭೂರ್ (ಕುಂದಾಪುರ) ಫಾಕನೂರ್ (ಬಾರಕೂರ್) ಮತ್ತು ಮಂಜುಲೂರು (ಮಂಗಳೂರು) ಗಳ ಬಗ್ಗೆ ಉಲ್ಲೇಖವಿದೆ.4

ದಕ್ಷಿಣ ಕನ್ನಡವೆಂಬುವುದು ಕರ್ನಾಟಕ ರಾಜ್ಯದ ಕರಾವಳಿ ಜಿಲ್ಲೆ ಇದಕ್ಕೆ ತನ್ನದೇ ಆದ ಸುದೀರ್ಘ ಇತಿಹಾಸ ಮತ್ತು ಪರಂಪರೆಯಿದೆ. ಕ್ರಿ.ಶ. 1860 ರಲ್ಲಿ ಕೆನಾರಾ ಜಿಲ್ಲೆಯೆಂದು ಕರೆಯಲ್ಪಡುತ್ತಿತ್ತು. ಕಾಸರಗೋಡು ಮಂಗಳೂರು ಬಾರಕೂರು ಮತ್ತು ಉತ್ತರ ಕೆನರಾ ಜಿಲ್ಲೆಗಳನ್ನು ಒಳಗೊಂಡಿತ್ತು. 1947 ರವರೆಗೆ ಬ್ರಿಟಿಷ್ ದಾಖಲೆಗಳು ಈ ಪ್ರದೇಶವನ್ನು ದಕ್ಷಿಣ ಕೆನರಾ ಜಿಲ್ಲೆಯೊಂದು ಉಲ್ಲೇಖಿಸಿದೆ. ಕ್ರಿಸ್ತಶಖೆಯ ಆರಂಭದ ಸಂಗಂ ಸಾಹಿತ್ಯ ಈ ಭೂ ಪ್ರದೇಶವನ್ನು ತುಳುನಾಡುವೆಂದು ಉಲ್ಲೇಖಿಸಿದೆ. ಶ್ರೀ ಲೋಗನ್ ತನ್ನ ಮಲಬಾರ್ ಮ್ಯಾನುವೇಲ್ ನಲ್ಲಿ "ತುಳು"ವ ವೆಂಬ ಪದವು ತುಳಬಾನ್ ಪೆರಮಾಳವೆಂಬ ಕೇರಳದ ಅರಸನಿಂದ ಬಂದಿದೆ ಮತ್ತು ದಕ್ಷಿಣ ಕನ್ನಡದ ಭಾಗವಾಗಿತ್ತೆಂದು ತಿಳಿಸಿರುತ್ತಾರೆ. ಸ್ಟರ್ರಕ್‌ರವರ ಪ್ರಕಾರ ತುಳುನಾಡವೆಂಬ ಪದ ತುಳುವೆಂಬ ಉಪಭಾಷೆಯಿಂದ ಬಂದಿದ್ದು ಇದು ದಕ್ಷಿಣ ಕೆನರಾ ಪ್ರದೇಶದ ಮೂಲ ಹೆಸರಾಗಿತ್ತು. 5

1498 ರಲ್ಲಿ ಪೋರ್ಚುಗೀಸರ ಆಗಮನದವರೆಗೆ ಈ ಹೆಸರೇ ಬಳಕೆಯಲ್ಲಿತ್ತು ಮತ್ತು ಕನ್ನಡ ಈ ಪ್ರದೇಶದ ಅಧಿಕೃತ ಭಾಷೆಯಾಗಿದ್ದು ಎಲ್ಲಾ ದಾಖಲೆಗಳು ಈ ಭಾಷೆಯಲ್ಲೆ ನಮೂದಾಗಿದೆ. ಬ್ರಿಟಿಷರ ಕಾಲದಲ್ಲಿ ಕೆನರಾವೆಂಬ ಹೆಸರು ಜನಪ್ರಿಯವಾಯಿತ್ತಲ್ಲದೇ ಮಲಬಾರ್ ಜಿಲ್ಲೆಯೆಂಬ ಹೆಸರಿಗೆ ಪರ್ಯಾಯವಾಗಿ ಚಾಲ್ತಿಗೆ ಬಂತು. ಈ ಜಿಲ್ಲೆ ವ್ಯಾಪಾರ ವಾಣಿಜ್ಯ ಚಟುವಟಿಕೆಯ ಕೇಂದ್ರವಾಗಿ ಪರಿವರ್ತನೆಗೊಂಡಿತ್ತು. ಖ್ಯಾತ ಇತಿಹಾಸ ತಜ್ಞಾ ಕೆ. ಎಂ. ಪಣಿಕ್ಕಾರ್‌ರವರ ಪ್ರಕಾರ ಅರೇಬಿಯಾವು ಭಾರತದ ಪಶ್ಚಿಮ ಕರಾವಳಿಯೊಂದಿಗೆ 3 ಸಾವಿರ ವರ್ಷಗಳಿಗೂ ಹಿಂದೆಯೇ ಸಾಗರ ಸಂಪರ್ಕ ಹೊಂದಿತ್ತೆಂದು ತಿಳಿಸುತ್ತಾರೆ.6

1799 ರಿಂದ 1947 ರವರೆಗೆ ಕೆನರಾ ಪ್ರದೇಶವು ಬ್ರಿಟಿಷರ ಆಳ್ವಿಕೆಯಲ್ಲಿಯೇ ಇರುವುದನ್ನು ಕಾಣಬಹುದು. ಕ್ರಿ.ಶ. 1860 ರ ದಶಕದಲ್ಲಿ ಉತ್ತರ ಕನ್ನಡವನ್ನು ಆಡಳಿತರ ಅನೂಕೂಲತೆಯ ದೃಷ್ಟಿಯಿಂದಾಗಿ ಮುಂಬೈ ಪ್ರಾಂತ್ಯಕ್ಕೆ ಸೇರಿಸಿದರು. ಈ ರೀತಿಯಲ್ಲಿ, ದಕ್ಷಿಣ ಕನ್ನಡವು ಸುಮಾರು 150 ವರ್ಷಗಳ ಕಾಲ ಬ್ರಿಟಿಷ್ ಆಡಳಿತಕ್ಕೆ ಒಳಪಟ್ಟಿದ್ದು ಸ್ಥಳೀಯರಿಗೆ ಇದೊಂದು ಸುದೀರ್ಘವಾದ ಅವಧಿ ಮತ್ತು ಅನುಭವ ನೀಡಿದೆ. ಬಿದನೂರಿನ ಇಕ್ಕೇರಿ ಆಡಳಿತದ ನಂತರ ಹೈದರ್ ಆಲೀ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆಗೆ ಒಳಗಾಗಿದ್ದ ಈ ನಾಡು ಪಶ್ಚಿಮಾತ್ಯ ತತ್ವಗಳನ್ನು ಆಧರಿಸಿದ ಆಂಗ್ಲ ಆಡಳಿತದ ಪ್ರಭಾವಕ್ಕೆ ಒಳಪಟ್ಟಿರುತ್ತದೆ. 7

1834 ರಲ್ಲಿ ಆಮರ ಸುಳ್ಯ ಹಾಗೂ ಪುತ್ತೂರು ಮಾಗಣೆ (ತಾಲೂಕು ಉಪ ಘಟಕಗಳು) ಕೊಡಗು ಪ್ರಾಂತ್ಯದಿಂದ ಬೇರ್ಪಡಿಸಲ್ಪಟ್ಟು ದಕ್ಷಿಣ ಕನ್ನಡಕ್ಕೆ ವರ್ಗಾವಹಿಸಲ್ಪಟು ದಕ್ಷಿಣ ಕನ್ನಡ ವಿಸ್ತಾರ ಇನ್ನಷ್ಟು ವಿಸ್ತರವಾಯಿತು. ಆದರೆ 18ನೇ ಶತಮಾನದ ಕೊನೆಯ ಭಾಗದಲ್ಲಿ ಬ್ರಿಟಿಷರ ಸೂಪರ್ದಿಗೆ ಬಂದಾಗ ಇಲ್ಲಿ ಕಂಡು ಬರುವ ವಿವಿಧ ಧಾರ್ಮಿಕ ಗುಂಪಿನವರು ಜಾತಿ ಪಂಗಡ ಹಾಗೂ ಬುಡಕಟ್ಟುಗಳ ಪರಿವರ್ತನೆಯ ಪ್ರಕ್ರಿಯೆಗೆ ಒಳಗಾಗುತ್ತದೆ.8

ವಿಶಾಲ ತಳಹದಿಯಲ್ಲಿ ದಕ್ಷಿಣ ಕನ್ನಡದ ಜನರನ್ನು ಹಿಂದೂಗಳು ಮುಸಲ್ಮಾನರು, ಕ್ರೈಸ್ತರು ಹಾಗೂ ಜೈನರೆಂಬುದಾಗಿ ಗುರುತಿಸಿದರು 1891 ಜನಗಣತಿಯ ಪ್ರಕಾರ ಹಿಂದೂಗಳೂ 81.68%, ಮುಸ್ಲಲ್ಮಾನರು 10.60% ಕ್ರೈಸ್ತರು 6.75% ಮತ್ತು ಜೈನರು 0.97% ನೆಲೆಸಿದರು. ಈ ಜಿಲ್ಲೆಯಲ್ಲಿ ಬ್ಯಾರಿ ಜನಾಂಗವು ಸಾಂಸ್ಕೃತಿಕವಾಗಿ ಒಂದು ವಿಶಿಷ್ಟ ಪಂಗಂಡವಾಗಿದ್ದು ತನ್ನದೇ ಆದ ಇತಿಹಾಸ ಪರಂಪರೆಯನ್ನು ಹೊಂದಿದ್ದು ದಕ್ಷಿಣ ಕನ್ನಡದ ಜಿಲ್ಲೆಗೆ ವಿವಿಧ ಕ್ಷೇತ್ರಗಳಲ್ಲಿ ಪರಿಣತಿಯನ್ನು ಸಾಧಿಸಿ, ಗಣನಿಯ ಪ್ರಮಾಣದಲ್ಲಿ ದೇಶದ ನಿರ್ಮಾಣ ಮತ್ತು ಅಭಿವೃದ್ಧಿಗೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ.9

ತುಳುನಾಡು ಹಲವಾರು ಕೆರೆ ಮತ್ತು ನದಿಗಳಿಂದಾಗಿ ಫಲವತ್ತಾಗಿದೆ. ಗಂಗೊಳ್ಳಿ ಸೀತಾನದಿ, ಸುವರ್ಣ, ಶಾಂಭವಿ, ಪಲ್ಗುಣಿ ನೇತ್ರಾವತಿ ಮತ್ತು ಚಂದ್ರಗಿರಿ ಇಲ್ಲಿನ ಪ್ರಮುಖ ನದಿಗಳಾಗಿವೆ. ಇವುಗಳು ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳಿಗೆ ಸಂಪರ್ಕ ವ್ಯವಸ್ಥೆ ಕಲ್ಪಿಸಿ ಈ ಭಾಗದ ಆರ್ಥಿಕ ಚಟುವಟಿಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ.

ಸಂಸ್ಕೃತಿ ಮತ್ತು ಸಂಪ್ರದಾಯಗಳ ಆಧಾರದಲ್ಲಿ ಬಾರಕೂರು, ಮಂಗಳೂರು, ಕಾಸರಗೋಡು ಎಂಬ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಈ ಜಿಲ್ಲೆಯ ಮೊಟ್ಟ ಮೊದಲ ಜನಗಣನೆ ಕ್ರಿ.ಶ. 1871 ರಲ್ಲಿ ನಡೆಯಿತ್ತು. ನಂತರ ಪ್ರತಿ ಹತ್ತು ವರ್ಷಕ್ಕೊಮ್ಮೆ ಈ ಗಣತಿ ಕಾರ್ಯ ನಡೆಯುವುತ್ತಾ ಬಂದಿದೆ. 1891 ರ ಪ್ರಕಾರ ಜನಗಣತಿಯ ಅಂಶವನ್ನು ಸ್ಟರ್‌ಕ್ ತನ್ನ ಪುಸ್ತಕದಲ್ಲಿ ದಾಖಲಿಸಿದ್ದಾನೆ.10

ಅರೇಬಿಯಾದಲ್ಲಿ ಇಸ್ಲಾಂ ಪ್ರಸಾರವಾಗತೊಡಗಿದ ನಂತರ ಈ ಧರ್ಮ ಕರಾವಳಿಯನ್ನು ತಲುಪಿತ್ತು ಆದರೆ ಪ್ಲೀನಿ ಕ್ರಿ. ಶ. 1 ರಲ್ಲಿಯೇ ಕರಾವಳಿಯಲ್ಲಿ ಅರಬ್ ವಸತಿಗಳು ಇತ್ತೆಂದು ದಾಖಲಿಸಿದ್ದಾನೆ. ಆತನ ಈ ವಾದದ ಪ್ರಕಾರ ಇಸ್ಲಾಂ ಪೂರ್ವ ಕಾಲದಿಂದಲೂ ವಾಣಿಜ್ಯ ವ್ಯಾಪಾರ ಸಂಬಂಧಗಳು ಜಾರಿಯಲ್ಲಿ ಇತ್ತೆಂದು ತಿಳಿಸುತ್ತಾನೆ ಹೀಗೆ ಕ್ರಿ.ಶ. 1ನೇ ಯ ಶತಮಾನದಿಂದಲೇ ಮಲಬಾರ್ ತುಳುನಾಡ ಕರಾವಳಿಗೂ, ಅರಬರಿಗೂ ವ್ಯಾಪಾರ ಸಂಬಂಧದ ನಂಟು ಇತ್ತು ಅರಬರು ಸ್ಥಳೀಯ ಮಹಿಳೆಯರನ್ನು ಮದುವೆಯಾಗಿ ಹುಟ್ಟಿಕೊಂಡ ವರ್ಗವೇ ಬ್ಯಾರಿ ಸಮುದಾಯ. ಅರಬರು ಕರಾವಾಳಿಯಲ್ಲಿ ಪೋರ್ಚುಗೀಸರು ಅಧಿಕಾರ ಹಿಡಿಯುವ ತನಕ ವ್ಯಾಪಾರ ವ್ಯವಹಾರಗಳಲ್ಲಿ ನಿಯಂತ್ರಣ ಸಾಧಿಸಿದ್ದರು.11

ಕ್ರಿ.ಶ. 7ನೇ ಯ ಶತಮಾನದಲ್ಲಿ ಪ್ರವಾದಿ ಮಹಮ್ಮದ್ ರವರ ಪವಿತ್ರ ಸಂದೇಶ ಚಿತ್ತಾನೆಗೊಂಡ ಬಳಿಕ ಅರಬರು ಮುಸ್ಲಿಂರಾದರು, ಕರಾವಳಿಯ ಅರಬರು ಅವರ ಸಂತನದವರು ಮುಸ್ಸಿಂ ರಾದರು ಪಶ್ಚಿಮ ಕರಾವಳಿಯ ಮಲಬಾರ್ ಹಾಗೂ ತುಳುನಾಡಿನ ಪ್ರದೇಶಿಕ ಸಂಸ್ಕೃತಿಯ ಪ್ರಭಾವದಿಂದ ಈ ಮುಸ್ಲಿಂ ಮರು ಕೊಂಕಣಿ ಮಾತನಾಡುವವರು ನವಾಯತರೆಂದು ಬ್ಯಾರಿ ಭಾಷೆ ಮಾತನಾಡುವವರು ಬ್ಯಾರಿಗಳೆಂದು ಮಲಬಾರಿನ ಮಲಯಾಳಂ ಮಾತನಾಡುವವರು ಮಾಪಿಳ್ಳೆಯವರೆಂದು ,ಕೋರ ಮಂಡಲದ ಪ್ರದೇಶದ ತಮಿಳು ಮುಸ್ಲಿಂಮರು ಲಬ್ಬೆಗಳೆಂದು ಕರೆಯಲ್ಪಟ್ಟರು. ಕರಾವಳಿಯ ತಲಮೂಲ ಸಮುದಾಯಗಳಾದ ಬಿಲ್ಲವ ಮೊಗವೀರ ಮುಕ್ಕುಟ ಬೋವಿ ಅರ್ಥಿಕವಾಗಿ ಕೆಳಮಟ್ಟದಲ್ಲಿದ್ದ ಜೈನರು ಅರಬರ ಆರ್ಥಿಕ ಬಲ ಹಾಗೂ ಬಾತೃತ್ವದ ಉದಾರತೆಗೆ ಮನಸೊತ್ತು ಮತಾಂತರಗೊಂಡರು ಎಂಬುದಾಗಿ ತುಳುನಾಡಿನ ಪ್ರಸಿದ್ಧ, ಬೊಬ್ಬರ್ಯ ದೈವದ ಪಾದ್ದಾನದಲ್ಲಿ ಉಲ್ಲೇಖಸಿರುವುದನ್ನು ಕಾಣಬಹುದು.12

ಮಲಬಾರ್ ಮತ್ತು ತುಳುನಾಡಿನಲ್ಲಿ ಇಸ್ಲಾಂ ನ ಪ್ರಚಾರ ಮಾಡಿದ ಕೀರ್ತಿಯನ್ನು ತಿಳಿಯಲು ನಮಗೆ ದೊರಕುವ ಮುಖ್ಯವಾದ ಆಧಾರ ಕರಾವಳಿ ಜಿಲ್ಲೆಗಳಲ್ಲಿ ತುಳುನಾಡಿನಲ್ಲಿ ಮುಖಂಡರಾಗಿದ್ದ ಚೌಟರು, ಬಂಗರು ಮತ್ತು ಕಲ್ಲಿಕೋಟೆಯಲ್ಲಿ ಝುಮೋರಿಯನ್ ನಿರ್ಣಯಕ ಪಾತ್ರವನ್ನು ಸಮಾಜದಲ್ಲಿ ಹೊಂದಿದ್ದರು. ಮಲಬಾರ್ ಝುಮೋರಿಯನ್ ದೊರೆಗಳು ಮುಸ್ಲಿಂ ರಿಗೆ ಎಲ್ಲ ರೀತಿಯ ಸೌಲಭ್ಯಗಳನ್ನು ನೀಡಿ ಮಸೀದಿಗಳನ್ನು ನಿರ್ಮಿಸಲು ಅನುಮತಿಯನ್ನು ಕೊಟ್ಟರು. ಯಾವುದೇ ಅಡೆತಡೆಯಿಲ್ಲದೆ ಧರ್ಮ ಪ್ರಚಾರ ಚಟುವಟಿಕೆಗಳನ್ನು ನಡೆಸುವ ಅವಕಾಶವನ್ನು ಕಲ್ಪಿಸಿದರು. ಹಾಗೂ ಕೇರಳದಲ್ಲಿ ಮುಸ್ಲಿಂ ಜನಸಂಖ್ಯೆ ಹೆಚ್ಚಲು ಅತ್ಯಂತ ಮುಖ್ಯ ಕಾರಣ ಕಲ್ಲಿಕೋಟೆಯ ಝುಮೋರಿಯನ್ ದೊರೆ ನೀಡಿದ ಪೋತ್ಸಾಹ. ಈ ಕುಟುಂಬಕ್ಕೆ ಸೇರಿದ ಚೇರುಮಾನ್, ಪೆರುಮಾಳ್ ಎಂಬಾತ ಕೇರಳದ ರಾಜಕುಟುಂಬದ ಪೈಕಿ ಇಸ್ಲಾಂ ಗೆ ಮತಾಂತರಗೊಂಡ ಮೊದಲ ವ್ಯಕ್ತಿ.13

ದೀನಾರ್ ಮಿಶನರಿಗಳು ಮಲಬಾರ್ ಮತ್ತು ತುಳುನಾಡಿನಲ್ಲಿ ಇಸ್ಲಾಂ ನ ಪ್ರಚಾರ ಕೆಲಸವನ್ನು ನಿರ್ವಹಿಸಿದರು. ಜೇರುಮಾನ್ ಪೆರುಮಾಳ್ ಮತಂತಾರದ ನಂತರ ಮಾಲಿಕ್ ಬಿನ್ ದಿನಾರ್ ಮತ್ತು ಅದರ ಪರಿವಾರ ಮಲಬಾರ್‌ಗೆ ಬಂತು. ಕೊಡಂಗಲ್ಲೂರಿನ ಅರಸನಿಗೆ ಪತ್ರವನ್ನು ನೀಡಿ ಅವರನ್ನು ಬರಮಾಡಿಕೊಂಡ ಅ ಚೆನ್ನಾಗಿ ನೋಡಿಕೊಳ್ಳುವುದರ ಜೊತೆಗೆ ಮಸೀದಿಗಳನ್ನು ನಿರ್ಮಿಸಲು ಸ್ಥಳವನ್ನು ಒದಗಿಸಿದರು.

ಇಸ್ಲಾಂ ಧರ್ಮ ಪ್ರಚಾರ ಕೆಲಸಕ್ಕೆ ಪ್ರೋತ್ಸಾಹವನ್ನು ಕೊಟ್ಟ ಮಾಲಿಕ್ ಬಿನ್ ದೀನಾರ್ ಅಲ್ಲಿನ ಮೊಟ್ಟಮೊದಲ ಖಾಝಿಯಾಗಿದ್ದರು ಇದರ ಕುರಿತಾಗಿ ಮಲಬಾರ್ ಮತ್ತು ಕೆನರಾ ಕರಾವಳಿಗೆ ಇಸ್ಲಾಂ ಪ್ರವೇಶಕ್ಕೆ ಸಂಬಂಧಿಸಿದ ಈ ವೃತ್ತಾಂತ ಅತ್ಯಂತ ನಂಬಲರ್ಹವೆಂಬುವುದು ಶ್ರೀ ಲೋಗನ್ ರವರ ವಾದ.14

ಎಳನಾಡಿನ ಮಾಥಾಯಿ ಪಳ್ಳಿಯಲ್ಲಿ ಸಿಕ್ಕ ಫಲಕರ ಪ್ರಕಾರ ಕಾಸರಗೋಡಿನ ಮಾಲಿಕ್ ಬಿನ್ ದೀನಾರ್ ಮಸೀದಿಯನ್ನು ಹಿಜರಿ ಶಕ 20 ಅಂದರೆ ಕ್ರಿ.ಶ. 642 ರಲ್ಲಿ ನಿರ್ಮಿಸಲಾಗಿತ್ತೆಂದು ಹೇಳಲಾಗಿದೆ. ಮಹಫತುಲ್ ಮುಜಾಹಿದಿನ್ ಹಸ್ತುಕಡೆ ಮಸೀದಿ ನಿರ್ಮಾಣಗೊಂಡ ಬಗ್ಗೆ ಉಲ್ಲೇಖಿಸುತ್ತದೆ.15

ಈ ನೆಲೆಯಲ್ಲಿ ಅರಬರ ವ್ಯಾಪಾರ ದಿನದಿಂದ ದಿನಕ್ಕೆ ಬೆಳೆದಂತೆ ಇಲ್ಲಿಯ ಜನರೊಂದಿಗೆ ಬೆರೆಯ ತೊಡಗಿದರು ಇಲ್ಲಿನ ಹುಡುಗಿಯರೊಂದಿಗೆ ಮದುವೆಯಾಗಿ ಸಂಸಾರವನ್ನು ಆರಂಭಿಸಿದರು ಆ ಮೂಲಕ ಅರಬ್ ಮೂಲದ ಸಂಸಾರಗಳೂ ವೃದ್ಧಿಸುವುದರೊಂದಿಗೆ ಇಸ್ಲಾಂನ ಧಾರ್ಮಿಕ ನಡೆನುಡಿಗಳ ಸ್ವೀಕೃತವಾಗಿ ಏಕದೇವತಾರಾಧನೆ ಮಾಡುವ ಜನಾಂಗ ಈ ತುಳುನಾಡಿನ ಮಣ್ಣಿನಲ್ಲಿ ಜನ್ಮ ತಾಳಿತ್ತು. ಅರಬರ ಈ ಮದುವೆಯ ಉದ್ದೇಶ ಕೇವಲ ಧಾರ್ಮಿಕವಾಗಿರಲಿಲ್ಲ, ಬಿರುಗಾಳಿಯಿಂದ ಹಡುಗುಗಳು ಹೊರಡಲು ಆಗದ ಸಂಧರ್ಭದಲ್ಲಿ ಇಡೀ ಮಳೆಗಾಲವನ್ನೆ ತುಳು ನಾಡಿನ ಕರಾವಳಿಯನ್ನು ಕಳೆಯಬೇಕಿತ್ತು. ಆ ಸಂದರ್ಭದಲ್ಲಿ ದೈಹಿಕ ಮಾನಸಿಕ ಆಕರ್ಷಣೆಯು ಸೇರಿ ಸಂಬಂಧಗಳು ಏರ್ಪಡುತ್ತಿತ್ತು. ಆದರೆ ಅರಬರ ಈ ಸಂಬಂಧ ಒಂದೇ ಋತುವಿಗೆ ಸೀಮಿತವಾಗಿರದೇ ಮುಂದಿನ ವ್ಯಾಪಾರಿ ಋತುವಿನಲ್ಲಿ ತಮ್ಮ ಕರುಳಿನ ಬಳ್ಳಿಗಳನ್ನು ಅರಸಿ ಬರುವ ಅರಬರು ಮನವೀಯ ಸಂಬಂಧಗಳು, ಧಾರ್ಮಿಕ ಶ್ರದ್ಧೆಗಳು ಸೇರಿ ಇಸ್ಲಾಮಿನ ಸಂದೇಶವನ್ನು ನೀಡಿದೆ ವ್ಯಾಪಾರ ಸಂಬಂಧದ ಮೂಲಕ ತುಳುನಾಡಿಗೆ ಬ್ಯಾರಿ ಸಮುದಾಯ ಈ ಮೂಲಕ ಆಗಮನವಾಯಿತೆಂದು ತಿಳಿಯಲಾಗಿದೆ.16

ಈ ನೆಲೆಯಲ್ಲಿ ಜಿಲ್ಲೆಯ ಪ್ರಮುಖ ಜನಾಂಗಗಳಲ್ಲಿ ಬ್ಯಾರಿ ಸಮುದಾಯ ಪ್ರಮುಖ ಜನಾಂಗವಾಗಿದ್ದು ಈ ಸಮುದಾಯ ಸುಮಾರು 1300 ವರ್ಷಗಳಿಗಿಂತ ಅಧಿಕವಾದ ದೀರ್ಘ ಇತಿಹಾಸವನ್ನು ಹೊಂದಿದೆ. ಈ ಸಮುದಾಯದ ಕುರಿತಾಗಿ ಕಳೆದ ಮೂರು ದಶಕದಲ್ಲಿ ಅಧ್ಯಯನಗಳು, ಸಂಶೋಧನೆಗಳು ನಡೆಯುತ್ತಿದ್ದು ಹಲವಾರು ವಿಚಾರಗಳು ಬೆಳಕಿಗೆ ಬಂದಿದೆ ಪರಿಸ್ಥಿತಿಗೆ ಅನುಗುಣವಾಗಿ ಈ ಸಮುದಾಯದ ಕುರಿತು ಚಾರಿತ್ರಿಕ ಅಧ್ಯಯನ ಅಗತ್ಯವಿದ್ದು ಆ ನೆಲೆಯಲ್ಲಿ "ಬ್ಯಾರಿ ಸಮುದಾಯ – ಒಂದು ಅವಲೋಕನ" ವೆಂಬ ವಿಷಯದಲ್ಲಿ ಸಂಶೋಧನ ಕಾರ್ಯವನ್ನು ಮಾಡುವ ಪ್ರಯತ್ನ ಇದಾಗಿದೆ.

**ಪರಾಮರ್ಶನ ಗ್ರಂಥಗಳು :-**


1. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು – ಪುಟ ಸಂಖ್ಯೆ 15

2. ಪ್ರೊ. ಸುಬೇರ್ – ಪೆರಿಮೇ – ಪುಟ ಸಂಖ್ಯೆ 103

   ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು – ಪುಟ ಸಂಖ್ಯೆ 28

3. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ 50

4. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು – ಪುಟ ಸಂಖ್ಯೆ 30

5. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ 102

6. ಪ್ರೊ. ಸುಬೇರ್ – ಪೆರಿಮೇ – ಪುಟ ಸಂಖ್ಯೆ 103

7. ಡಾ.ಕೆ.ಎಂ. ಲೋಕೇಶ್ – ಪೆರಿಮೇ – ಪುಟ ಸಂಖ್ಯೆ 18

8. ಅದೇ

9. ಅದೇ – ಪುಟ ಸಂಖ್ಯೆ 19

10. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ 5

11. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು – ಪುಟ ಸಂಖ್ಯೆ 17

12. ಪ್ರೊ. ಎ.ವಿ. ನಾವಡ – ತುಳುನಾಡ ಬ್ಯಾರಿಗಳು

13. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು – ಪುಟ ಸಂಖ್ಯೆ 19

14. ಅದೇ – ಪುಟ ಸಂಖ್ಯೆ 20

15. ಅದೇ – ಪುಟ ಸಂಖ್ಯೆ 21

16. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ 19

# ಅಧ್ಯಾಯ – 1

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮಾನವನ ಬಹುಮುಖ ಪ್ರತಿಭೆಯನ್ನು ತಿಳಿಯಲು ಇತಿಹಾಸವನ್ನು ವೈಜ್ಞಾನಿಕವಾಗಿ ಸಂಶೋಧಿಸುವುದು ಅತೀ ಅಗತ್ಯವಾಗಿದೆ. ತಮ್ಮ ಇತಿಹಾಸದ ಪ್ರಜ್ಞೆಯಿಂದಲೇ ಪ್ರಪಂಚದ ಹಲವು ರಾಷ್ಟ್ರಗಳ ಜನರು ಇಂದಿಗೂ ಒಗ್ಗಟ್ಟಾಗಿರಲು ಸಾಧ್ಯವಾಗಿದೆ. ಪ್ರಸಿದ್ಧ ಇತಿಹಾಸಕಾರ ರಾಂಕೆಯ ಅಭಿಪ್ರಾಯದಂತೆ ಇತಿಹಾಸವನ್ನು ದುರುಪಯೋಗಪಡಿಸಿಕೊಂಡವರು ಆ ದೇಶದ ಶಾಪಕ್ಕೆ ಒಳಗಾಗುವರು ಎಂದಿರುವುದು ನಿಜವಾದ ಮಾತಾಗಿದೆ. ಇದು ಭಾರತದಲ್ಲಿ ನಡೆದಿದೆಯೆನ್ನಬಹುದು ಬ್ರಿಟಿಷರು ಭಾರತ ದೇಶವನ್ನು ಇಬ್ಭಾಗಿಸಲು ಇಲ್ಲಿನ ಇತಿಹಾಸವನ್ನು ಉಪಯೋಗಿಸಿ ಬರೆಯುವಾಗ ಇಲ್ಲಿನ ಜನಸಂಖ್ಯೆಯ ಮುಖ್ಯ ಭಾಗವಾಗಿರುವ ಮುಸ್ಲಿಮರನ್ನು ವೈರಿಗಳ ರೂಪದಲ್ಲಿ ಚಿತ್ರಿಸಿ ಭಾರತದಲ್ಲಿ ಹಿಂದೂ ಮತ್ತು ಮುಸ್ಲಿಮರ ಮಧ್ಯೆ ದ್ವೇಷವನ್ನು ಬಿತ್ತಿದರು. ಹಾಗೂ ಇದನ್ನೇ ಅವರ ಹಿಂಬಾಲಕ ಕೆಲವು ಇತಿಹಾಸಕಾರರು ಮುಂದುವರಿಸುತ್ತಾ ಉತ್ತರ ಮತ್ತು ದಕ್ಷಿಣ ಭಾರತದ ಮುಸ್ಲಿಮರ ಅಭಿವೃದ್ಧಿಯನ್ನು ಮತ್ತು ಅವರು ಈ ದೇಶಕ್ಕೆ ನೀಡುತ್ತಿರುವ ಕೊಡುಗೆಯನ್ನು ಕಡೆಗಾಣಿಸಿದ್ದಾರೆನ್ನಬಹುದು.

ಈ ರೀತಿಯಾಗಿ ಕರಾವಳಿ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು 1300 ವರ್ಷಗಳಿಗಿಂತಲೂ ಅಧಿಕವಾದ ಇತಿಹಾಸವನ್ನು ಹೊಂದಿರುವ ಮುಸ್ಲಿಮರನ್ನು ಬ್ಯಾರಿ ಜನಾಂಗವೆಂದು ಗುರುತಿಸಿದ್ದು ಬ್ಯಾರಿ ಸಮುದಾಯವು ತನ್ನದೇ ಆದ ಧೀರ್ಘ ಇತಿಹಾಸವನ್ನು ಹೊಂದಿದೆ. ಇತ್ತೀಚಿನ ಕೆಲವು ದಶಕಗಳವರೆಗೆ ಈ ಸಮುದಾಯವು ಇತಿಹಾಸಕಾರರು, ಲೇಖಕರು ಮತ್ತು ಸಂಶೋಧಕರ ಕಣ್ಣಿಗೆ ಬೀಳದೇ ಕಣ್ಮರೆಯಾಗಿರುವುದು ವಿಷಾದನೀಯ. ಆದರೆ ಇತ್ತೀಚೆಗೆ ಕೆಲವು ಪ್ರಮುಖ ಇತಿಹಾಸಕಾರರು, ಲೇಖಕರು ಮತ್ತು ಸಂಶೋಧಕರು ಈ ಸಮುದಾಯದ ಕುರಿತಾಗಿ ಅಧ್ಯಯನ ನಡೆಸಿ ತಮ್ಮ ಅಭಿಪ್ರಾಯಗಳನ್ನು ನೀಡಿರುವುದು ಗಮನಾರ್ಹವಾಗಿದೆ. ಈ ಸಮುದಾಯದ ಕುರಿತಾಗಿ ಈಗಾಗಲೇ ಹಲವು ಸಂಶೋಧನೆಗಳು, ಕೃತಿಗಳು, ಲೇಖನಗಳು ಮತ್ತು ಮಾಹಿತಿಗಳು ಪ್ರಕಟವಾಗಿದ್ದು ಕೆಲವೊಂದು ವಿಚಾರದಲ್ಲಿ ಸ್ಪಷ್ಟತೆಯಿಲ್ಲದೆ ಅಂತರಗಳನ್ನು ಕಾಣಬಹುದು.

ಇತ್ತೀಚಿನವರೆಗೆ ಈ ಸಮುದಾಯಕ್ಕೆ ಸಂಬಂಧಿಸಿದಂತೆ ಭಾಷೆ, ಲಿಪಿ ಮತ್ತು ಸಾಂಸ್ಕೃತಿಕ ಅಧ್ಯಯನದ ಕುರಿತಾಗಿ ಹಲವು ಮಾಹಿತಿಗಳು ಲಭ್ಯವಿದ್ದರೂ ಬ್ಯಾರಿ ಸಮುದಾಯ ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿಯಲ್ಲಿ ಹಲವು ವರ್ಷಗಳಿಂದ ನೀಡುತ್ತಾ ಬಂದಿರುವ ಕೊಡುಗೆಗಳು ಮತ್ತು ಸಮಕಾಲೀನವಾಗಿ ಬದಲಾಗುತ್ತಿರುವ ಕಾಲಘಟ್ಟಕ್ಕೆ ಅನುಸಾರವಾಗಿ ಮತ್ತೊಮ್ಮೆ ಚಾರಿತ್ರಿಕವಾದ ಅವಲೋಕನ ಮಾಡುವುದು ಅನಿವಾರ್ಯ ಹಾಗೂ ಈ ವಿಷಯಕ್ಕೆ ಸಂಬಂಧಿಸಿದ ನೈಜ ಹಾಗೂ ಸ್ಪಷ್ಟವಾದ ಮಾಹಿತಿ ನೀಡಬೇಕೆನ್ನುವುದು ಮುಖ್ಯ ಉದ್ದೇಶವಾಗಿದೆ.

ಪ್ರಸ್ತುತ ಜಿಲ್ಲೆಯಲ್ಲಿ ನೆಲೆಸಿರುವ ಪ್ರಮುಖ ಸಮುದಾಯಗಳಲ್ಲಿ ಒಂದಾಗಿರುವ ಬ್ಯಾರಿ ಸಮುದಾಯದ ಸಾಮಾಜಿಕ ಜೀವನ ಹಾಗೂ ಅವರು ಅವಲಂಬಿಸಿರುವ ವೃತ್ತಿ ಮತ್ತು ಆಧುನಿಕ ಕಾಲಘಟ್ಟದಲ್ಲಿ ಅವರ ವೃತ್ತಿಗಳಲ್ಲಿ, ಆರ್ಥಿಕ ರಂಗ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಾಗುತ್ತಿರುವ ಮಹತ್ತರವಾದ ಬದಲಾವಣೆಗಳು ಹಾಗೂ ಬ್ಯಾರಿಗಳ ಕೌಟುಂಬಿಕ ವ್ಯವಸ್ಥೆ, ಆಧುನಿಕ ಶಿಕ್ಷಣಕ್ಕೆ ನೀಡುತ್ತಿರುವ ಪ್ರಾಮುಖ್ಯತೆಗಳ ಕುರಿತಾಗಿ ಚಾರಿತ್ರಿಕವಾದ ಅವಲೋಕನ ಮಾಡುವುದರ ಮೂಲಕ ಸ್ವತಂತ್ರ ಪೂರ್ಣ ಮಾಹಿತಿ ಲಭ್ಯ ಆಗಬೇಕೆನ್ನುವ ಉದ್ದೇಶದಿಂದ 'ಬ್ಯಾರಿ ಸಮುದಾಯ – ಒಂದು ಚಾರಿತ್ರಿಕ ಅವಲೋಕನ' ವೆಂಬ ವಿಷಯವನ್ನು ಅಧ್ಯಯನಕ್ಕಾಗಿ ಕೈಗೆತ್ತಿಕೊಂಡಿದ್ದು ಇಲ್ಲಿಯವರೆಗೆ ಬೆಳಕಿಗೆ ಬಾರದೆ ಕಣ್ಮರೆಯಾದ ವಿಚಾರಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ಈ ಅಧ್ಯಯನದ ಮೂಲಕ ಮಾಡಲಾಗಿದೆ.

ಜಿಲ್ಲೆಯ ಮುಸ್ಲಿಮರಲ್ಲಿ 80% ಜನ ಬ್ಯಾರಿಗಳಾಗಿದ್ದು ಈ ಸಮುದಾಯದ ಕುರಿತಾಗಿ ಆದ ಅಧ್ಯಯನ ತೀರಾ ಕಡಿಮೆ. ಈ ನೆಲೆಯಲ್ಲಿ ಈ ಸಮುದಾಯದ ಚಾರಿತ್ರಿಕವಾದ ಅವಲೋಕನವನ್ನು ಮಾಡುವುದರ ಮೂಲಕ ಈ ಅಧ್ಯಯನದಲ್ಲಿ ಸಮುದಾಯದ ಮೂಲಕ ಈ ಅಧ್ಯಯನದಲ್ಲಿ ಸಮುದಾಯದ ಮೂಲ, ಆಧಾರಗಳು, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಸ್ಥಿತಿಗತಿಗಳು ಮತ್ತು ಜಿಲ್ಲೆಯ ಸೌಹಾರ್ಧತೆಯಲ್ಲಿ ಬ್ಯಾರಿಗಳ ಪಾತ್ರ ಹಾಗೂ ಸಮುದಾಯದ ಪ್ರಗತಿ ಮತ್ತು ಸಮಕಾಲೀನ ಸ್ಥಿತಿಗತಿಗಳ ಕೂಲಂಕುಷವಾದ ಅಧ್ಯಯನ ಅವಶ್ಯಕತೆಯಿರುವುದರಿಂದ ಈ ವಿಷಯಗಳ ಕುರಿತಾಗಿ ಸಂಶೋಧಕರ ಅಧ್ಯಯನಕ್ಕೆ ಸಿಗದೇ ಕಣ್ಮರೆಯಾದ ಅಥವಾ ಚದುರಿ ಹೋದ ಮಾಹಿತಿಯನ್ನು ಒಂದುಗೂಡಿಸಿ ಸ್ಪಷ್ಟವಾದ, ನಿಖರವಾದ ಮತ್ತು ಚಾರಿತ್ರಿಕ ಅವಲೋಕನ ಮಾಡುವ ಪ್ರಯತ್ನ ಇದಾಗಿದೆ.

ಈ ಸಮುದಾಯದ ಕುರಿತಾಗಿ ಪ್ರಕಟವಾದ ಕೃತಿಗಳು, ಲೇಖನಗಳು ಮತ್ತು ಮಾಹಿತಿಗಳು ಬೆರಳೆಣಿಕೆಯಾಗಿದ್ದು ಸ್ಪಷ್ಟತೆಯಿಲ್ಲದೆ ಮಾಹಿತಿಗಳ ಬಗ್ಗೆ ವೈಜ್ಞಾನಿಕವಾಗಿ ಸಂಶೋಧಿಸುವುದು ಅತ್ಯಗತ್ಯವಾಗಿದೆ. ಈ ನೆಲೆಯಲ್ಲಿ ಈ ವಿಷಯದ ಕುರಿತಾಗಿ ಈಗಾಗಲೇ ನಡೆಸಲಾದ ಸಂಶೊಧನೆಗಳು, ಕೃತಿಗಳು, ಲೇಖನಗಳು ಮತ್ತು ಮಾಹಿತಿಗಳ ಮೂಲ ದಾಖಲೆ ಮತ್ತು ಇತರ ಉಪ ದಾಖಲೆ, ಕ್ಷೇತ್ರ ಕಾರ್ಯ ಹಾಗೂ ವಿದ್ವಾಂಸರು ಮತ್ತು ಸಂಪನ್ಮೂಲ ವ್ಯಕ್ತಿಗಳ ನಡುವಿನ ಸಂಭಾಷಣೆ ಇತ್ಯಾದಿ ಕಾರ್ಯ ತಂತ್ರಗಳ ಮೂಲಕ ಪ್ರಾಮಾಣಿಕವಾದ, ಸ್ಪಷ್ಟವಾದ, ನಿಖರವಾದ ಮಾಹಿತಿಯನ್ನು ನೀಡುವುದು ಈ ಅಧ್ಯಯನದ ಉದ್ದೇಶವಾಗಿದೆ.

ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಪ್ರಬಂಧದಲ್ಲಿ ಮುಖ್ಯವಾಗಿ ಪ್ರಮುಖ ಆರು ಅಧ್ಯಯಗಳನ್ನಾಗಿ ವಿಂಗಡಿಸಲಾಗಿದ್ದು ಮೊದಲನೇಯದಾಗಿ ವಿಷಯಕ್ಕೆ ಸಂಬಂಧಿಸಿದಂತೆ ಇತಿಹಾಸಕ್ಕೆ ಅಗತ್ಯವಾಗಿ ಬೇಕಾಗಿರುವ ಆಧಾರಗಳ ಕುರಿತಾಗಿ ಅಧ್ಯಯನ ನಡೆಸಲಾಗಿದ್ದು ಐತಿಹಾಸಿಕವಾದ ಪ್ರಮುಖ ಆಧಾರಗಳಾದ ಪುರಾತತ್ವ ಆಧಾರಗಳು, ಲಿಖಿತ ಆಧಾರಗಳಾದ ದೇಶಿಯ ಮತ್ತು ವಿದೇಶಿ ಬರವಣಿಗೆಗಳು ಕೈಫಿಯತ್ತ್, ಸ್ಥಳೀಯ ಬರವಣಿಗೆಗಳು ಪ್ರಕಟಿತ ಮತ್ತು ಅಪ್ರಕಟಿತ ದಾಖಲೆಗಳು, ಕ್ಷೇತ್ರ ಕಾರ್ಯಗಳಂತಹ ಪ್ರಮುಖ ಅಧಾರಗಳ ನೆಲೆಯಲ್ಲಿ ಬ್ಯಾರಿ ಸಮುದಾಯದ ಇತಿಹಾಸವನ್ನು ಅಧ್ಯಯನ ಮಾಡಲು ಲಭ್ಯವಿರುವ ದಾಖಲೆಯಾಗಿ ಮಾಹಿತಿಗಳನ್ನು ಅಧ್ಯಯನ ನಡೆಸಲಾಗಿದೆ.

ಮೂರನೇ ಅಧ್ಯಯನದಲ್ಲಿ ಬ್ಯಾರಿ ಸಮುದಾಯದ ಮೂಲ ಮತ್ತು ಅದರ ಕುರಿತಾಗಿ ಇತಿಹಾಸಕಾರರು, ಲೇಖಕರು ಮತ್ತು ಸಂಶೋಧಕರು ತಿಳಿಸಿದ ಮಾಹಿತಿಗಳನ್ನು ಕೇಂದ್ರೀಕರಿಸಿ ಬ್ಯಾರಿ ಸಮುದಾಯದ ಮೂಲ ಅರೇಬಿಯಾವಾಗಿದ್ದರೂ ತುಳುನಾಡಿನ ಬ್ಯಾರಿಗಳನ್ನು ಕಸಬು ಆಧಾರಿತವಾಗಿ, ಭಾಷಾ ಆಧಾರಿತವಾಗಿ ಅಥವಾ ಧರ್ಮ ಆಧಾರಿತವಾಗಿ ಅವರ ಮೂಲದ ಕುರಿತಾದ ಅವಲೋಕನವನ್ನು ನಡೆಸಲಾಗಿದೆ. ಈ ಜಿಲ್ಲೆಯಲ್ಲಿ ಹಲವು ವರ್ಷಗಳಷ್ಟು ಕಾಲ ನೆಲೆಸಿ ಇಲ್ಲಿನ ಸಂಸ್ಕೃತಿಗೆ ವಿಶೇಷವಾದ ತನ್ನದೇ ಆದ ಕೊಡುಗೆಯನ್ನು ನೀಡುತ್ತಾ ಬಂದಿರುವ ಬ್ಯಾರಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳಾದ ಆಹಾರ ಪದ್ಧತಿ, ಉಡುಗೆ-ತೊಡುಗೆ, ವಿನೋದಾವಳಗಳು, ಕುಟುಂಬ ವ್ಯವಸ್ಥೆ, ವಿವಾಹ ಪದ್ಧತಿ, ವೃತ್ತಿಗಳು ಮತ್ತು ಮೂಡನಂಬಿಕೆಗಳ ಕುರಿತಾಗಿ ಮತ್ತು ಸಾಂಪ್ರದಾಯಿಕ ಮತ್ತು ಸಮಕಾಲೀನವಾದ ಹೋಲಿಕೆಯ ಮುಖಾಂತರ ಚರ್ಚಿಸಿದ್ದು, ಧಾರ್ಮಿಕವಾದ ಆಚರಣೆಗಳು, ಹಬ್ಬ-ಹರಿದಿನಗಳು, ಉರೂಸ್ ಸಮಾರಂಭಗಳು ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಬ್ಯಾರಿ ಸಮುದಾಯ ಇಂದು ಹೆಚ್ಚಾಗಿ ಶಿಕ್ಷಿತರಾಗುವುದರೊಂದಿಗೆ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿದ್ದು ಭೌತಿಕ ಹಾಗೂ ಧಾರ್ಮಿಕ ಶಿಕ್ಷಣಕ್ಕೆ ನೀಡುತ್ತಿರುವ ಆದ್ಯತೆಯ ಕುರಿತಾಗಿ ಸಾಂಪ್ರದಾಯಿಕ ಮತ್ತು ಸಮಕಾಲೀನವಾದ ವೈಜ್ಞಾನಿಕ ಅವಲೋಕನವನ್ನು ನಡೆಸಲಾಗಿದೆ.

ಐದನೇ ಅಧ್ಯಯನದಲ್ಲಿ ಭಾರತ ದೇಶ ಜಾತ್ಯಾತೀತ ರಾಷ್ಟ್ರವಾಗಿದ್ದು ಸೌಹಾರ್ದತೆ ಮತ್ತು ಕೋಮು ಸಾಮರಸ್ಯಕ್ಕೆ ಪ್ರಪಂಚಕ್ಕೆ ಮಾದರಿಯಾಗಿರುವ ಏಕೈಕ ರಾಷ್ಟ್ರವಾಗಿದ್ದರೂ ಇಂತಹ ರಾಷ್ಟ್ರದಲ್ಲಿ ಅನೇಕ ಕೋಮು ಸಂಘರ್ಷಗಳು ನಡೆಯುತ್ತಿದ್ದು ಅಭಿವೃದ್ಧಿಗೆ ಮಾರಕವಾಗಿದ್ದರೂ ಈ ಪರಿಸ್ಥಿತಿ ಕರ್ನಾಟಕ ರಾಜ್ಯದಲ್ಲೂ ಹೆಚ್ಚುತ್ತಿರುವುದು ಕಳವಳಕಾರಿ ಅಂಶವಾಗಿದೆ. ಆದರೆ ಕರಾವಳಿ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ ಕೋಮು ಸೌಹಾರ್ದತೆಗೆ ಸಾಕ್ಷಿಯಾಗಿದ್ದು, ಇಲ್ಲಿನ ಜನಸಂಖ್ಯೆಯಲ್ಲಿ ಹಿಂದೂಗಳು, ಮುಸ್ಲಿಮರು, ಕ್ರೈಸ್ತರು ಹೆಚ್ಚಾಗಿದ್ದು ಸೌಹಾರ್ದಯುತವಾದ ಜೀವನವನ್ನು ನಡೆಸಿಕೊಂಡು ಬಂದಿರುವುದು ಗಮನಾರ್ಹವಾದ ವಿಷಯವಾಗಿದ್ದು ಈ ನೆಲೆಯಲ್ಲಿ ಬ್ಯಾರಿ ಸಮುದಾಯ ಹಬ್ಬ ಹರಿದಿನಗಳ ಆಚರಣೆಯಲ್ಲಿ ಸೌಹಾರ್ದತೆಯ ಸಂದೇಶಗಳು ಮತ್ತು ಉರೂಸ್ ಜಾತ್ರೆ ಉತ್ಸವಗಳ ಮೂಲಕ ಸೌಹಾರ್ದತೆಯ ಸಂಕೇತಗಳನ್ನು ಕೇಂದ್ರ ಬಿಂದುವಾಗಿಟ್ಟುಕೊಂಡು ಅಧ್ಯಯನ ನಡೆಸಲಾಗಿದೆ.

ಪ್ರಸಕ್ತ ಜಿಲ್ಲೆಯ ಅಭಿವೃದ್ಧಿಯಲ್ಲಿ ಬ್ಯಾರಿ ಸಮುದಾಯದ ಜನರು ಬೇರೆ ಬೇರೆ ಕ್ಷೇತ್ರಗಳಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡಿದ್ದು ಸಮಕಾಲೀನ ಕಾಲಘಟ್ಟದಲ್ಲಿ ಬ್ಯಾರಿಗಳು ಮುಖ್ಯವಾಗಿ ರಾಜಕೀಯ ಕ್ಷೇತ್ರದಲ್ಲಿ, ಶೈಕ್ಷಣಿಕ ರಂಗದಲ್ಲಿ ಮತ್ತು ಆರ್ಥಿಕ ಹಾಗೂ ಇತರ ಕ್ಷೇತ್ರಗಳಲ್ಲಿ ಗುರುತಿಸಿಕೊಂಡು ಸಮುದಾಯದ ಮತ್ತು ಜಿಲ್ಲೆಯ ಅಭಿವೃದ್ಧಿಯಲ್ಲಿ ಯಾವ ರೀತಿ ತೊಡಗಿಸಿಕೊಂಡು ಪರಿವರ್ತನೆ ಹಗೂ ಅಭಿವೃದ್ಧಿ ಹೊಂದುತ್ತಿರುವರೆಂಬುದರ ಕುರಿತಾಗಿ ಆರನೇ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

# ಅಧ್ಯಾಯ – 2

## ಪ್ರಮುಖ ಆಧಾರಗಳು

ದಕ್ಷಿಣ ಕನ್ನಡದಲ್ಲಿ ನೆಲೆಸಿರುವ ಬ್ಯಾರಿ ಸಮುದಾಯ 1200 ವರ್ಷಗಳಿಗಿಂತ ಅಧಿಕವಾದ ಇತಿಹಾಸವನ್ನು ಹೊಂದಿದ್ದು ಈ ಸಮುದಾಯದ ಕುರಿತಾಗಿ ಇತಿಹಾಸ ಅಧ್ಯಯನಕ್ಕೆ ಯೋಗ್ಯವಾದ ವಿಷಯವಾಗಿದೆ. ಈ ಜನಾಂಗದ ಇತಿಹಾಸಕ್ಕೆ ಸಂಬಂಧಿಸಿದ ಅಧ್ಯಯನಕ್ಕೆ ಆಧಾರಗಳ ಕೊರತೆಯಿದ್ದರೂ ದೊರಕುವ ಕೆಲವು ಪ್ರಮುಖ ಆಧಾರಗಳನ್ನು ಕೇಂದ್ರಿಕರಿಸಿ ಈ ಸಮುದಾಯದ ಚಾರಿತ್ರಿಕ ಅಧ್ಯಯನ ನಡೆಸುವುದು ಮುಖ್ಯವಾಗಿದೆ. ಅಧ್ಯಯನದ ದೃಷ್ಟಿಯಿಂದ ಲಭ್ಯವಿರುವ ಪ್ರಮುಖ ಆಧಾರಗಳು, ಶಾಸನಗಳು, ವಿದೇಶಿ ಪ್ರವಾಸಿಗರ ಪ್ರವಾಸ ಕಥನಗಳು, ಜನಪದ ಕಥೆಗಳು, ಪಾಡ್ದನಗಳು, ಗ್ರಾಮ ಪದ್ಧತಿ, ಭೂತಾಳ ಪಾಂಡ್ಯನ ಕಟ್ಟುಕಟ್ಟಳೆಗಳು, ಕೇರಳೋತ್ಪತ್ತಿ, ಕೈಪಿಯತ್ತ್‌ಗಳು, ಅಪ್ರಕಟಿತ ದಾಖಲೆಗಳು, ಸ್ಥಳ ಪುರಾಣಗಳು, ಪ್ರಕಟಿತ ಗ್ರಂಥಗಳು, ತೌಫತುಲ್ ಮುಜಾಹಿದ್ದೀನ್ ಹಾಗೂ ಕ್ಷೇತ್ರ ಕಾರ್ಯ ಇತ್ಯಾದಿಗಳ ಆಧಾರದಲ್ಲಿ ಈ ಸಮುದಾಯದ ಕುರಿತಾಗಿ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.1

ಶಾಸನಗಳು ಅತ್ಯಂತ ಪ್ರಮುಖವಾದ ಆಧಾರಗಳಲ್ಲಿ ಒಂದಾಗಿದೆ. ತುಳುನಾಡಿನಲ್ಲಿ ನೆಲೆಸಿರುವ ಬ್ಯಾರಿ ಸಮುದಾಯದ ಕುರಿತಾಗಿ ಶಾಸನಗಳಲ್ಲಿ ಉಲ್ಲೇಖವಿರುವ ಪ್ರಖ್ಯಾತವಾದ ಶಾಸನ ಹಂಜುಮಾನ್ ಶಾಸನ (ಅಂಜುಮಾನ್). ಈ ಶಾಸನಗಳಲ್ಲಿ ಮುಸ್ಲಿಮರಿಗೆ ಸಂಬಂಧಿಸಿದ ಪ್ರಮುಖ ಮಾಹಿತಿಗಳು ಲಭ್ಯವಿದೆ. ಈ ಶಾಸನಗಳು ಈ ಸಮುದಾಯವನ್ನು ಬ್ಯಾರಿಗಳೆಂದು ಉಲ್ಲೇಖಸಲ್ಪಟ್ಟಿರುವ ಮೊದಲ ಶಾಸನವಾಗಿದೆ.2

ಕ್ರಿ.ಶ 1569ರಲ್ಲಿ ಬಾರಕೂರ್ ಸಮೀಪವಿರುವ ಹೊಸಕೇರಿ ಮಠಕ್ಕೆ ದತ್ತಿ ನೀಡಿದ ಶಾಸನದಲ್ಲಿ 'ಹಮ್ಮುಬ್ಯಾರಿ' ವೆಂಬುವವರು ಭಾಗವಹಿಸಿದ್ದನ್ನು ಉಲ್ಲೇಖಿಸಲಾಗಿದೆ. 3

ಜೈನ ವರ್ತಕರ ಒಕ್ಕೂಟಗಳು ಸೆಟ್ಟಿಕಾರ ಸಂಘವೆಂದು, ಮುಸ್ಲಿಂ ವ್ಯಾಪಾರಿ ಘಟಕವನ್ನು ಹಂಜುಮಾನರು (ಅಂಜುಮಾನ್) ಎಂದು ಕರೆಯಲಾಗಿದೆ. 4

ತುಳುನಾಡಿನ ಕುರಿತಾಗಿ ಅರಿಕ್ಕಮೇಡುವಿನಲ್ಲಿ ನಡೆದ ಭೂ ಉತ್ಖನದಂತೆ ದಕ್ಷಿಣ ಭಾರತದಲ್ಲಿ ಇವರು ವಾಣಿಜ್ಯ ಸಂಬಂಧಗಳಿಗಾಗಿ ರೋಮನ್ ಕಾಲದಿಂದಲೂ ಕೆಂಪು ಸಮುದ್ರ, ಪರ್ಶಿಯನ್ ಗಲ್ಫ್‌ಗಳಿಗೆ ಹಡಗಿನಲ್ಲಿ ಪ್ರಯಾಣಿಸುತ್ತಿದ್ದರು ಎಂದು ಹೇಳಲಾಗಿದೆ. ಈ ರೀತಿಯಾಗಿ ದಕ್ಷಿಣ ಭಾರತದ ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಬಂಧಗಳು ಪಶ್ಚಿಮ ಏಷ್ಯಾ, ಈಜಿಪ್ಟ್, ರಾಷ್ಟ್ರಗಳೊಂದಿಗೆ ನಿಕಟವಾಗಿತ್ತೆಂದು ದೃಢವಾಗಿದೆ. 5

11ನೇ ಶತಮಾನಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಮುಸ್ಲಿಂ ವರ್ಧಕ ಸಂಘ 'ಹಂಜುಮಾನರ' ಉಲ್ಲೇಖವಿದ್ದು ಈ ಹಂಜಮಾನರು ಅಂತರಿಕ ಮತ್ತು ವಿದೇಶಿ ವ್ಯಾಪಾರದಲ್ಲಿ ತೊಡಗಿದ್ದು ಮುಖ್ಯವಾಗಿ ಸ್ಥಳೀಯ ಮಲಬಾರ್ ಮತ್ತು ವಿದೇಶಿ ಅರೇಬೀಯ. ಮಸ್ಕತ್ ಹಾಗೂ ಆಫ್ರಿಕ ದೇಶಗಳೊಂದಿಗೆ ವಾಣಿಜ್ಯ ಸಂಬಂಧ ಹೊಂದಿತ್ತೆಂಬುಂದನ್ನು ಸಾಬೀತು ಪಡಿಸಿವೆ. ಹಾಗೂ ತುಳುನಾಡಿನ ಅನೇಕ ಶಾಸನಗಳಲ್ಲಿ ಹಂಜಮಾನ್ ಮತ್ತು ನಖರ ಹಂಜುಮಾನಗಳ ಬಗ್ಗೆ ಉಲ್ಲೇಖವೆ.6

ಕ್ರಿ.ಶ. 1427ರ ಉತ್ತರ ಕನ್ನಡ ಜಿಲ್ಲೆಯ ಕಾಯ್ಕಿಣಿ ಎಂಬಲ್ಲಿ ದೊರೆತ ಶಿಲಾ ಶಾಸನವು ಉಲ್ಲೇಖಿಸದಂತೆ 1ನೇ ದೇವರಾಯ ಮತ್ತು ಆತನ ಸಾಮಂತ ನಗಿರೆಯ ಸಂಗೀರಾಯ (ಈತ ವಿಜಯನಗರದ ಗವರ್ನರ್ ಆಗಿದ್ದ ತಮ್ಮನ ಒಡೆಯನ ಸಮಕಾಲೀನ) ಕಾಲದಲ್ಲಿ ಹಂಜಮಾನರ ಮುಖ್ಯಸ್ಥನಾಗಿದ್ದ ಉಮ್ಮರ ಮರಕಲನ ಬಗ್ಗೆ ಉಲ್ಲೇಖಗಳವೆ. ಉಮ್ಮರ ಯಾನೆ ಉಮ್ಮರ್ ಎನ್ನುವುದು ಅರೇಬಿಯನ್ ಅಥವಾ ಪರ್ಶಿಯನ್ (ಮುಸ್ಲಿಂ) ಹೆಸರು ಮತ್ತು ಮರಕಲ ಎಂದರೆ ನಾವಿಕ. ಈ ಶಾಸನದ ಆಧಾರದಿಂದ ತಿಳದು ಬರುವುದೇನೆಂದರೆ ಉಮ್ಮರವೆನ್ನುವರು ಮುಸ್ಲಿಮ್ ಮತ್ತು ಆತನು ನಾವಿಕನಾಗಿದ್ದು, ಅರೇಬಿಯಾ ಮತ್ತು ಪರ್ಶಿಯಾ ಅವುಗಳ ಮುಸ್ಲಿಂ ವ್ಯಾಪಾರಿಗಳು ತುಳುನಾಡಿನ ಕರಾವಳಿಯಲ್ಲಿ ನೆಲೆಸಿದ್ದರುವೆನ್ನುವುದಕ್ಕೆ ಮುಖ್ಯವಾದ ಪುರಾವೆಯಾಗಿದೆ.7

ಪ್ರಸಿದ್ಧ ಇತಿಹಾಸಕಾರರಾದ ಸೂರ್ಯನಾಥ ಕಾಮತ್‌ರವರು 'ಹಂಜಮಾನ್' ವೆನ್ನುವುದು ಮುಸ್ಲಿಂ ವ್ಯಾಪಾರಿ ಸಂಸ್ಥೆಯೆಂದು ಒಪ್ಪಿಕೊಂಡಿದ್ದಾರೆ. ಅವರ ಈ ಅಭಿಪ್ರಾಯವನ್ನು ದೃಡೀಕರಿಸಿ, ಶಿಲಾದಾರ ಶಾಸನ, ಕರೆ ಪಟ್ಟಣ ಶಾಸನ ಹಾಗೂ ಕ್ರಿ.ಶ.981ರ ಕದಂಬರ ಶಾಸನಗಳು ಮಾಹಿತಿಗಳನ್ನು ನೀಡುತ್ತದೆ. ಕ್ರಿ.ಶ 1094 ರ ಕರೆಪಟ್ಟಣ ಶಾಸನವು 'ನವವಿಟ್ಟಕ ವಸ್ಯೆದನ' ಬಗ್ಗೆ ವಿವರಿಸುತ್ತದೆ. ಇಲ್ಲಿ 'ನವವಿಟ್ಟಕ ವಸ್ಯೆದ' ನು ನಾಡಿನ ಜನರ ಬಗ್ಗೆ ಕಾಳಜಿ ಮತ್ತು ಕಳವಳ ಉಳ್ಳವನಾಗಿದ್ದು ಜನರನ್ನು ತನ್ನ ದೋಣಿಗಳ ಮೂಲಕ ಪ್ರಯಾಣಿಸಲು ಸಹಾಯ ಮಾಡಿದ್ದನು. ನವವಿಟ್ಟಕ ಯಾನೆ 'ನಾವಿಕ' ಅಥವಾ 'ಸಮುದ್ರ ವ್ಯಾಪಾರಿ'ಯೆಂದು ವಸ್ಯೆದ ಎನ್ನುವುದು ಮುಸ್ಲಿಂ ಹೆಸರು ಇದು ಸ್ಯೆಯ್ಯದ್ ಎಂದು ತಿಳಿಯಲಾಗಿದೆ.8

ತುಳುನಾಡಿನಲ್ಲಿ ದೊರಕಿರುವ ಹಲವು ಶಾಸನಗಳು ಹಂಜಮಾನ್ ಅನ್ನು ಮುಸ್ಲಿಂ ವ್ಯಾಪಾರಿ ಸಂಸ್ಥೆಯೆಂದು ಪರಿಗಣಿಸಿದೆ. ಬಸರೂರಲ್ಲಿ ದೊರಕಿರುವ ಹಂಜಮಾನ್ ಶಾಸನವು ಹಂಜಮಾನದವರು ತೆರಿಗೆ ನೀಡದಿರುವ ಕುರಿತಾಗಿ ಉಲ್ಲೇಖಿಸಿದೆ ಇದನ್ನು ಪಳ್ಳಿ ಮರ್ಯಾದೆಯೆಂದು ಈ ತೆರಿಗೆಯನ್ನು ಸರಿ ಹೊಂದಿಸುವಂತೆ ನೋಡಿಕೊಳ್ಳಲಾಗಿದೆ. ಈ ರೀತಿ ಪಳ್ಳಿಗೆ ಚಂದಾ (ತೆರಿಗೆ) ಕೊಡುವವರು ಮುಸ್ಲಿಮರು ಎಂದು ಡಾ. ಸೂರ್ಯನಾಥ ಕಾಮತ್‌ರವರ ಅಭಿಪ್ರಾಯವಾಗಿದೆ.9

ತುಳುನಾಡಿಗೆ ಇಸ್ಲಾಂ ಧರ್ಮದ ಉದಯವು 7ನೇ ಶತಮಾನದ ಮಧ್ಯದಲ್ಲಿ ಆರಂಭವಾಯಿತು ಇದರ ಕೀರ್ತಿಯು ಮುಸ್ಲಿಂ ದಿನಾರ್ ಮಿಶನರಿಯಾಗಿದ್ದ ಮಾಲಿಕ್ ದಿನಾರ್‌ರವರಿಗೆ ಸಲ್ಲುತ್ತದೆ.

ಮುಸ್ಲಿಂ ಕ್ಯಾಲೆಂಡರ್ ಆಧಾರದಲ್ಲಿ ಹಿಜರಿ 22ರ ಅವಧಿಯಲ್ಲಿ ಕಾಸರಗೋಡಿನಲ್ಲಿ ಮಸೀದಿ ಕಟ್ಟಿಸಿದರ ಕುರಿತಾಗಿ ಕಾಸರಗೋಡಿನ ತಳಂಗರೆಯ ಜಾಮೀಯ ಮಸೀದಿಯಲ್ಲಿ ಶಾಸನ ಲಭಿಸಿದ್ದು ಇದು ಅರೇಬಿಕ್ ಶಾಸನವೆಂದು 1990 ರಲ್ಲಿ ಇತಿಹಾಸಕಾರರಾದ ಖ್ವಾಜ ಜಿ.ಎಸ್. ಅಭಿಪ್ರಾಯಪಟ್ಟಿದ್ದಾರೆ. ಈ ಶಾಸನದ ಆಧಾರದಲ್ಲಿ ಇಸ್ಲಾಂ ಧರ್ಮ ಯಾವ ರೀತಿ ಪ್ರಗತಿ ಪಥದಲ್ಲಿ ಮುನ್ನಡೆಯುವುದರೊಂದಿಗೆ ಹಾಗೂ ವ್ಯಾಪಾರ ಕೇಂದ್ರವಾಗಿ ಅರಬ್‌ರೊಡನೆ ಸಂಪರ್ಕವನ್ನು ಇಟ್ಟುಕೊಂಡಿತ್ತೆಂದು ವಿವರಿಸುತ್ತದೆ. 10

ಕ್ರಿ.ಶ. 1396 ರಲ್ಲಿ ಉಳ್ಳಾಲದ ಹನುಮಂತ ದೇವಾಲಯದ ಹೊರಾಂಗಣದಲ್ಲಿರುವ ಶಾಸನದಲ್ಲಿ ಹಂಜಮಾನ ಬ್ಯಾರಿಗಳಿಗೆ ಮಂಗಳೂರಿನ ವಿಜಯನಗರದ ರಾಜ್ಯಪಾಲಕ ವೀರಅರಸ ಒಡೆಯನು ದಾನ ಮಾಡಿದ ಬಗ್ಗೆ ಉಲ್ಲೇಖವಿದೆ.11

ಕ್ರಿ.ಶ. 1474ರಲ್ಲಿ ಬಾರ್ಕೂರಿನಲ್ಲಿ ದೊರೆತ ಶಿಲಾಶಾಸನವು ಬಾರ್ಕೂರಿನ ನಖರಾ ಹಂಜಮಾನ ಒಂದು ಕಕ್ಷಿಯಾಗಿಯೂ ಮತ್ತು ಸೆಟ್ಟಿಕಾರ ಸಂಘ ಮುಡಿಲಾಗಳು ಮತ್ತು ಆರು ಬಲ್ಲಾಳರು ಇನ್ನೊಂದು ಕಕ್ಷಿಯಾಗಿಯೂ ಒಡೆಯೂರಿನ ಜಮೀನಿಗೆ ಸಂಬಂಧಿಸಿದಂತೆ ಇದ್ದ ವ್ಯಾಜ್ಯವನ್ನು ಬಾರ್ಕೂರಿನ ಗವರ್ನರ್ ಹಂಜಮಾನ್ ಪರವಾಗಿ ಇತ್ಯಾರ್ಥ ಪಡಿಸಿದ್ದನ್ನು ಎಲ್ಲಾ ಶಿಲಾಶಾಸನಗಳಿಂದ 16ನೇ ಶತಮಾನದ ವೇಳೆಗೆ ಬ್ಯಾರಿಗಳು(ಮುಸ್ಲಿಂರು) ಮಂಗಳೂರು ಭಟ್ಕಳ ಮತ್ತು ಹೊನ್ನವರಗಳಲ್ಲಿ ವ್ಯಾಪಾರಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ತಿಳಿಸುತ್ತದೆ. ಹಂಜುಮಾನರು ಪ್ರಮುಖ ವ್ಯಾಪಾರಿ ಸಂಘವಾಗಿ ಮಾರ್ಪಟ್ಟಿದ್ದು ಅಂದಿನ ಆಡಳಿತಗಾರರು ಅವರ ಮೇಲೆ ಬಾರೀ ತೆರಿಗೆ ಹಾಕಿದ್ದರು ಮತ್ತು ಮುಸ್ಲಿಂ ನಿವಾಸಿಗಳಿಂದ ಅವರಿಗೆ ಗೌರವ ದೊರೆಯುತ್ತಿತ್ತು.

'ಪಳ್ಳಿ' ಮಾರ್ಯದೆವೆಂಬ ವಿಶೇಷ ನೀತಿಯನ್ನು ಮಸೀದಿಗಳಿಗೆ ನೀಡಲಾಗಿತ್ತು ಇದರ ಕುರಿತಾಗಿ ಕ್ರಿ.ಶ. 1565 ರ ಬಾರ್ಕೂರಿನಲ್ಲಿ ದೊರೆತ ಶಿಲಾಶಾಸನ ಅಂಜುಮಾನರು ತೆರಿಗೆಯನ್ನು ಬಂಗಾರದ ರೂಪದಲ್ಲಿ ಕೊಡಲು ಸಾಧ್ಯವಾಗದಿದ್ದ ಸಂದರ್ಭದಲ್ಲಿ ತಮ್ಮ ಬಳಯಿದ್ದ ಪಳ್ಳಿ ಮಾರ್ಯಾದೆಯನ್ನು ಹಿಂದಿರುಗಿಸುತ್ತಿದ್ದರೆಂದು ಶಿಲಾಶಾಸನಗಳು ತಿಳಿಸುತ್ತದೆ.12

ಕ್ರಿ.ಶ. 1418 ರ ಕೋಡಿಯಲ್‌ಬೈಲ್ ಶಾಸನದಲ್ಲಿ ಉಲ್ಲೇಖಿಸಿದಂತೆ ವಿಜಯನಗರದ ರಾಜ್ಯಪಾಲ ತಿಮ್ಮಣ್ಣ ಒಡೆಯನಿಗೂ ಮತ್ತು ಮುಸ್ಲಿಂ ಹಂಜಮಾನರವರಿಗೂ ನಡೆದ ಸಂಘರ್ಷದಿಂದಾಗಿ ಮುಸ್ಲಿಮರ ನಾಲ್ಕೈದು ಪಳ್ಳಿ (ಮಸೀದಿ)ಯನ್ನು ತಿಮ್ಮಣ್ಣ ಒಡೆಯನು ನೆಲಸಮಗೊಳಿಸುತ್ತಾನೆ.

ಈ ಘಟನೆಯನ್ನು ತಿಳಿದ ವಿಜಯನಗರದ ಅರಸರು ಮತ್ತು ರಾಜ್ಯಪಾಲರುಗಳು, ಬಂಗ, ಚೌಟ, ಅಜಿಲ, ಮತ್ತು ಇತರ ಎಲ್ಲಾ ಗೌರವನ್ವಿತರು ಆ ಮಸೀದಿಗೆ ಭೇಟಿ ನೀಡಿ ಪಶ್ಚತಾಪಪಟ್ಟು ಜಮಾಹತ್‌ಪಳ್ಳಿಗೆ(ಮಸೀದಿಗೆ) ಎಣ್ಣೆ ಮತ್ತು ಭೂ ದಾನ ಇನ್ನಿತರ ಕಾಣಿಕೆಯನ್ನು ನೀಡಿ ಇನ್ನು ಮುಂದೆ ಈ ಮಸೀದಿಗೆ ದಾನ ಮಾಡಿದ ಭೂಮಿಯನ್ನು ಯಾರು ಕಬಳಿಸಿದರೆ, ಅವರು ಕಾಶಿಗೆ ಹೋಗಿ ಬಂದು ಸಾವಿರ ಗೋವುಗಳನ್ನು ಕೊಂದ ಪಾಪ ಮತ್ತು ಒಂದು ಸಾವಿರ ಬ್ರಾಹ್ಮಣರನ್ನು ಕೊಲೆಗೈದ ಪಾಪ ತಗಲುವುದೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.13

ಕ್ರಿ.ಶ. 1628 ರ ಶಾಸನ ಒಂದರಂತೆ ಕೆಳದಿಯ ಅರಸ ಕೆಳದಿ ನಾಯಕನು ಮುಲ್ಲ ಹಾಜಿ ಎನ್ನುವವನ ಮುಖಾಂತರ ಮಸೀದಿ ನಿರ್ಮಿಸಲು ಭೂಮಿಯನ್ನ ಮಂಜೂರು ಮಾಡಿದ್ದು ಕ್ರಿ.ಶ 1706 ರ ದಾಖಲೆಯ ಪ್ರಕಾರ ಪೋಕಚ್ಚು ಬ್ಯಾರಿವೆನ್ನುವ ಕೆಳದಿ ಅರಸರ ಸೇನಾಧಿಪತಿಗೆ ಮಲಬಾರ್‌ನೊಂದಿಗೆ ನಡೆದ ಯುದ್ಧದಲ್ಲಿ ಸೇವೆ ಸಲ್ಲಿಸಿದದ್ದಾಗಿ ಕೆಳದಿ ನಾಯಕರು ಭೂಮಿಯನ್ನು ಬಳುವಳಿಯಾಗಿ ನೀಡಿದನು.14

ಕ್ರಿ.ಶ. 1419 ರ ಹಂಜಮಾನ ಶಾಸನವು ನೆನಿಸುವಂತೆ ಮಂಗಳೂರಿನಲ್ಲಿ ಸಾಕಷ್ಟು ಸಂಖ್ಯೆಯ ಮುಸ್ಲಿಮರಿದ್ದರು, ಜುಮಾ ಮಸೀದಿಯಲ್ಲದೆ ಇತರ ನಾಲ್ಕೈದು ಮಸೀದಿಗಳು ಇತ್ತು ವಿಜಯನಗರ ರಾಜರ ಅಧಿಕಾರಿಯ ಸಣ್ಣ ತಪ್ಪಿನಿಂದಾಗಿ ಇಡೀ ವಿಜಯನಗರ ಆಡಳಿತವೇ ಎಚ್ಚೆತ್ತುಕೊಳ್ಳುವಂತೆ ಮಾಡಿತಲ್ಲದೆ ದಾನ ನೀಡುವಾಗ ಅದಕ್ಕೆ ನೀಡಿದ ಆದೇಶವು ಅದಕ್ಕಿಂತಲೂ ಮಿಗಿಲಾದದು. ಈ ಶಾಸನವು ಅರೇಬಿಯದ ಪ್ರವಾಸಿ ಇಬ್ನ್ ಬತೂತ ಕ್ರಿ.ಶ. 1442 ರಲ್ಲಿ ತುಳುನಾಡಿಗೆ ಭೇಟಿ ನೀಡಿ ಮಂಗಳೂರು ಮತ್ತು ಅಲ್ಲಿಯ ಜನಜೀವನದ ಬಗ್ಗೆ ತನ್ನ ಬರವಣಿಗೆಯಲ್ಲಿ ವಿವರಣೆಗಳನ್ನು ತಿಳಿಸಿರುವುದು ಮೇಲಿನ ಹೇಳಿಕೆಗಳನ್ನು ನಂಬುವಂತೆ ಮಾಡುತ್ತದೆ.15

ಕ್ರಿ.ಶ. 1175 ರಲ್ಲಿ ಇದ್ರಾನ್ ಮಸೂದಿಯೆನ್ನುವ ಮುಸ್ಲಿಂ ಪ್ರವಾಸಿ ಕೌಡೆಲ್(ಮಂಗಳೂರಿ)ಗೆ ಭೇಟಿ ನೀಡಿ ಇಲ್ಲಿ 4000 ಮುಸ್ಲಿಮರುವಿರುವುದಾಗಿ ಅಲ್ಲಿನ ಹಿಂದುಗಳು ಮತ್ತು ಮುಸ್ಲಿಮರು ಸಹೋದರರಂತೆ ನೋಡಿಕೊಳ್ಳುತ್ತಾರೆಂದು ನಂತರ ಈತ ದೋಣಿಯ ಮೂಲಕ ಮಣೇಲ್‌ಗೆ ಪ್ರಯಾಣಿಸಿ ಅಲ್ಲಿ ಹಲವಾರು ವ್ಯಾಪಾರಿಗಳಿರುವುದನ್ನು ಕಂಡುಕೊಂಡನೆಂದು, ಅಲ್ಲಿ ವಿವಿಧ ರೀತಿಯ ವಿಗ್ರಹಗಳಿರುವ ದೇವಾಲಯವಿದ್ದು ನದಿಯ ಬದಿಯಲ್ಲಿ ಆತನಿಗೆ ಮಸೀದಿಯನ್ನು ಕಟ್ಟಲು ಅಲ್ಲಿನ ಜನ ಅನುಮತಿ ನೀಡಿದರೆಂದು ಉಲ್ಲೇಖಿಸಿದ್ದಾನೆ.16

ಕ್ರಿ.ಶ. 926 ರಲ್ಲಿ ರಾಷ್ಟ್ರಕೂಟ ವಂಶಕ್ಕೆ ಸೇರಿದ 3ನೇ ಇಂದ್ರ, ರಾಜನ ಕಾಲದ ತುಳುನಾಡು ಮತ್ತು ಅರೇಬಿಯಗಳ ನಡುವೆ ಪುರಾತನ ಕಾಲದಿಂದಲೂ ವ್ಯಾಪಾರ ಸಂಬಂಧವಿತ್ತು.

ಕ್ರಿ.ಶ. 4 ಮತ್ತು 5ನೇ ಶತಮಾನದಲ್ಲಿ ತುಳುನಾಡಿನೊಂದಿಗೆ ಅರಬರ ವ್ಯಾಪಾರ ಸಂಬಂಧದ ಬಗ್ಗೆ ಹಲವಾರು ದಾಖಲೆಗಳು ಲಭ್ಯವಿದ್ದು ಪರ್ಶಿಯಾದ ಕುದುರೆಗಳನ್ನು ಶ್ರೀಲಂಕಾಕ್ಕೆ ತರುತ್ತಿದುದು ಈ ವ್ಯಾಪಾರ ಪಶ್ಚಿ.ಮ ಕರಾವಳಿಯವರೆಗೆ ವಿಸ್ತರಿಸಿಕೊಂಡಿತ್ತು ಎಂದು ಕೊಸ್ಮೋಸ್ 'ಇಂಡಿಕೋ ಬಸ್ತ್' ಎನ್ನುವ 6ನೇ ಶತಮಾನದ ಗ್ರಂಥದಲ್ಲಿ ಉಲ್ಲೇಖವಿದೆ. 17

7ನೇ ಶತಮಾನದ ಅರಬೀ ದಾಖಲೆಯೊಂದರಲ್ಲಿ ತುಳುನಾಡಿನ ಬಂದರ್ ಮಂಗಳೂರಿನ ಬಗ್ಗೆ ಉಲ್ಲೇಖವಿದ್ದು ರಶೀದುದ್ದೀನ್ ಕ್ರಿ.ಶ. 1310 ರಲ್ಲಿ ತುಳುನಾಡಿನ ಬಗ್ಗೆ ಹೇಳುತ್ತ ಕರಾವಳಿಯಲ್ಲಿರುವ ನಗರಗಳಲ್ಲಿ ಸಿಂಧಬೂರ್, ಫಾಕನೂರು ಮತ್ತು ಕಂಜಲ್ ಊರು ಮುಖ್ಯವಾದದು ಎಂದು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ.18

ಕ್ರಿ.ಶ. 1330ರಲ್ಲಿ ಅಬುಲ್‌ಫಿಧಾವೆನ್ನುವ ಪ್ರವಾಸಿ ತನ್ನ ಕಥನದಲ್ಲಿ ಸಿಂದಬೂರು ಮತ್ತು ಚಿಕ್ಕನಗರ ಬಸರೂರಿನ ಬಗ್ಗೆ ಬರೆದಿದ್ದಾನೆ. ಕ್ರಿ.ಶ. 1342 ರಲ್ಲಿ ತುಳುನಾಡಿಗೆ ಭೇಟಿ ನೀಡಿದ ಅರಬ್ ಪ್ರವಾಸಿ ಇಬ್ನ್ ಅಬ್ದುಲ್ಲಾ ಇಬ್ನ್ ಬತೂತ ಮಂಗಳೂರಿಗೆ ಭೇಟಿ ನೀಡಿದ ಬಗ್ಗೆ ವಿವರಿಸುತ್ತಾ ಮಂಗಳೂರು ಸಮುದ್ರದ ದೊಡ್ಡ ಅಳಿವೆ ಬಾಗಿಲಲ್ಲಿದೆ. ಈ ಅಳಿವೆಯನ್ನು 'ತೋಳ ಅಳಿವೆ' ಎಂದು ಕರೆಯಲಾಗುತ್ತದೆ. 19

ಇದು ಮಲಬಾರ್ ಕರಾವಳಿಯಲ್ಲೆ ಅತಿ ದೊಡ್ಡದು ಇಲ್ಲಿ ಸುಮಾರು 4000 ಮುಸ್ಲಿಮ್ ವ್ಯಾಪಾರಿಗಳು ವ್ಯಾಪಾರ ಮಾಡುತ್ತಿದ್ದು ಈ ಊರು ಶುಂಠಿ ಮತ್ತು ಕರಿಮೆಣಸಿಗೆ ಪ್ರಸಿದ್ಧವಾದದು. ಇಲ್ಲಿನ ಅರಸರು ಕರಾವಳಿಯಲ್ಲೆ ಅತೀ ಬಲಿಷ್ಟ ಆಡಳಿತಗಾರನು. ಆತನನ್ನು ರಾಮದೇವನೆಂದು. ಇಲ್ಲಿನ ಮುಸ್ಲಿಮರ ಬಗ್ಗೆ ಹೇಳುತ್ತಾ ಪ್ರಖ್ಯಾತ ಖಾಝಿ ಬದ್ರುದ್ದೀನ್ ಅಲಂಬಾರಿ ಎನ್ನುವವರು ವಿಜ್ಞಾನವನ್ನು ಕಲಿಸುತ್ತಿದ್ದರು ಹಾಗೂ ಅದಕ್ಕಾಗಿ ದೂರದ ಊರುಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಈತ ಬಾರಕೂರಿಗೂ ಭೇಟಿ ನೀಡಿದ್ದರ ಕುರಿತು ತನ್ನ ಕಥನದಲ್ಲಿ ತಿಳಿಸುತ್ತಾನೆ. 20

ಕ್ರಿ.ಶ. 1442 ರಲ್ಲಿ ಪರ್ಶಿಯಾದ ರಾಯಭಾರಿ ಅಬ್ದುಲ್ ರಜಾಕ್ ಅಲ್ ಸಮರ್ ಖಂಡಿ ಮಂಗಳೂರು ಬಂದರಲ್ಲಿ ಇಳಿದು ವಿಜಯನಗರ ರಾಜಧಾನಿಗೆ ಪ್ರಯಾಣ ಬೆಳೆಸಿದ ನಂತರ ಈತ ತುಳುನಾಡಿನ ಪೊಳಲಿ ರಾಜರಾಜೇಶ್ವರಿ ದೇವಸ್ಥಾನಕ್ಕೆ ಭೇಟಿ ನೀಡಿ ಪೊಳಲಿಯ ಶಿಲ್ಪಕಲೆಯನ್ನು, ಕಲಾವೈಭವನ್ನು ಪ್ರಶಂಶಿಸಿದ್ದಾನೆ.21

15ನೇ ಶತಮಾನದಲ್ಲಿ ಇಟಲಿಯ ಪ್ರವಾಸಿ ಡೆಲಾವೆಲ್ಲಿ ತುಳುನಾಡಿನ ಶಾಂತಿ ಮತ್ತು ಸುಭಿಕ್ಷೆಯ ಕಾಲವಾಗಿತ್ತು. ರಾಜಕೀಯವಾಗಿ ತುಳುನಾಡು ಚಟುವಟಿಕೆ ರಹಿತವಾಗಿದ್ದರೂ ವ್ಯಾಪಾರ– ವಾಣಿಜ್ಯದಲ್ಲಿ ವಿಶೇಷವಾಗಿ ವ್ಯಾಪಾರ–ವಾಣಿಜ್ಯ ಚಟುವಟಿಕೆಗಳು ಇಲ್ಲಿ ಅರಬ್ ವರ್ತಕರ ಆಗಮನದಿಂದ ಬಿರುಸಾಗಿ ಸಾಗಿತ್ತು. ಎಲ್ಲ ಧರ್ಮ ಮತ್ತು ಜಾತಿಯವರು ತುಳುನಾಡನ್ನು ಸಮನ್ವಯದ ಗೂಡಾಗಲು ಶ್ರಮಿಸಿದರು.

ಧಾರ್ಮಿಕ ಸಹಿಷ್ಣುತೆ ಈ ನೆಲದ ಉಸಿರಾಗಿದ್ದು ಧರ್ಮದ ಹೆಸರಲ್ಲಿ ಕಲಹ, ಸಂಘರ್ಷನೆ ಎಂದೂ ನಡೆಯುತ್ತಿರಲಿಲ್ಲ ಹಾಗೂ ಕೆಳದಿ ಅರಸರ ಸೇವೆಯಲ್ಲಿ ಮೂಸಬಾಯಿ(ಬ್ಯಾರಿ) ಎನ್ನುವ ಸೇನಾಧಿಕಾರಿ ಇದ್ದು ಈತ ಬಂಗ ಅರಸರ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಕೆಳದಿ ಅರಸರ ವಿಶೇಷವಾಗಿ ಕೆಳದಿ ವೆಂಕಟಪ್ಪ ನಾಯಕನ ಉತ್ತರಾಧಿಕಾರಿಗಳು ಹಾಗೂ ಮುಸ್ಲಿಮರನ್ನು ತಮ್ಮ ಸೈನ್ಯದಲ್ಲಿ ಸೇರಿಸುತ್ತಿದ್ದರು ಎಂದು ತಿಳಿಸಿದ್ದಾನೆ.22

ತುಳುನಾಡಿನ ಸಾಂಸ್ಕ್ರತಿಕ ಇತಿಹಾಸವನ್ನು ಅವಲೋಕಿಸಿದರೆ ಪಾಡ್ದನಗಳು ಅಥವಾ ಭೂತಾರಾಧನೆಯ ಶ್ಲೋಕಗಳು ಇಲ್ಲಿನ ಮುಖ್ಯ ಪರಂಪರೆಗಳೆಂದು ನಂಬಲಾಗಿದ್ದು ಭೂತಾರಾದನೆಯು ಈ ನಾಡಿನ ಅತೀ ಪುರಾತನ ಆರಾಧನಾ ಪದ್ಧತಿಯಾಗಿದ್ದು, 'ಆಲಿ'ವೆಂಬ ಮುಸ್ಲೀಮ್ ನಾಯಕನನ್ನು ಪಾಡ್ದನಗಳಲ್ಲಿ ದೈವ ಅಥವಾ ದೈವಿಕ ಪುರುಷನೆಂದು ವರ್ಣಿಸಲಾಗಿದೆ. 23

ಬೊಬ್ಬರ್ಯ್ಯನ ಪಾಡ್ದಣದಲ್ಲಿ ಒಬ್ಬ ಮುಸ್ಲಿಮ್ ನನ್ನು ದೈವಿಕ ಪುರುಷನಾಗಿ ಅಥವಾ ಮೀನುಗಾರರ ಆರಾಧ್ಯ ದೈವನಾಗಿ ಆರಾಧಿಸಲ್ಪಡುವುದು ಆಶ್ಚರ್ಯಕರವಾಗಿದೆ. ಬೊಬ್ಬರ್ಯನು ಇಲ್ಲವೆ ಬಾವು ಬ್ಯಾರಿ ತುಳುನಾಡಿನ ಕರಾವಳಿಯ ಜನರಿಗೆ ವಿಶೇಷವಾಗಿ ಮೀನುಗಾರರಿಗೆ ಸಂಕಷ್ಟದ ಕಾಲದಲ್ಲಿ ಸಹಾಯ ಹಸ್ತವನ್ನು ನೀಡುವ ದೈವವೆಂದು ನಂಬಲಾಗಿದೆ ಹಾಗೂ ಬೊಬ್ಬರ್ಯ ಪಾಡ್ದಣವು ಸುಮಾರು 11 ರಿಂದ 12ನೇ ಶತಮಾನದಲ್ಲಿ ರಚಿತವಾದದೆಂದು ಸಂಶೋಧಕಿ ಡಾ. ಸುಶೀಲಾ ಉಪಾಧ್ಯಾಯರವರ ಅಭಿಪ್ರಾಯ.24

ಪಾಡ್ದಣವೊಂದರಲ್ಲಿ ತುಳುನಾಡಿನ ಬ್ಯಾರಿಗಳ ಸಂಬಂಧವನ್ನು ವಿವರಿಸುಸುತ್ತಾ ಬ್ಯಾರಿಗಳು ಬ್ರಹ್ಮ ದೇವಸ್ಥಾನದ ಹತ್ತಿರ ಬಂದಾಗ ಹಳ್ಳಿಯ ಜನರು ಅವರನ್ನು ತಡೆದು ನೀವು ಜಾತಿ ಬ್ಯಾರಿಗಳೋ? ಅಥವಾ ನೀತಿ ಬ್ಯಾರಿಗಳೋ? ಎನ್ನುತ್ತಾ ಜಾತಿ ಬ್ಯಾರಿಗಳಾಗಿದ್ದರೆ ದೇವಸ್ಥಾನ ಮೊಗಸಾಲೆಗೆ ಪ್ರವೇಶಿಸಿ ಬಾಗಿಲನ್ನು ಮುಟ್ಟಿ ನಿಮಗೇನು ಬೇಕು ಎಂದು ಪ್ರಾರ್ಥಿಸಿ ಎಂದು ಹೇಳುತ್ತಿದ್ದು ಇದು ಮುಸ್ಲಿಮರು ತಮ್ಮ ಹಿಂದೂ ಸಹೋದರರಿಂದ ಪಡೆದ ಗೌರವ ದ ಸಂಕೇತವಾಗಿತ್ತೆಂದು ಬಿ.ಎ.ಸಾಲೆತ್ತೂರು ಅಭಿಪ್ರಾಯ ಪಡುತ್ತಾರೆ.25

16ನೇ ಶತಮಾನದಲ್ಲಿ ರಚಿತವಾದ 'ಅತ್ತಾವರ ದೈಯಂಗಳು' ಎನ್ನುವ ಪಾಡ್ದಣವು ತುಳುನಾಡಿನ ಮುಸ್ಲಿಮರ ಅಂತಸ್ತು ಆ ಕಾಲದಲ್ಲಿ ಹೇಗಿತ್ತು ಎಂಬುದನ್ನು ವಿವರಿಸುತ್ತದೆ. ಪಾಣೆಮಂಗಳೂರಿನ ಬಂಗರಾಜನ ಆಳ್ವಿಕೆಯಲ್ಲಿ ಮುಸ್ಲಿಮರ ಸಾಮಾಜಿಕ ಅಂತಸ್ತಿನ ಬಗ್ಗೆ 'ಅತ್ತಾವರ ಧೈಯಂಗಳೂ' ಪಾಡ್ದಣ ವಿವರಣೆ ನೀಡುತ್ತದೆ. 26

ಉದ್ಯಾವರ ವಾರ್ಷಿಕ ರಥೋತ್ಸವ ಸಮಯದಲ್ಲಿ ಅತ್ತಾವರ ಧೈಯಂಗಳು ಎನ್ನುವ ಭೂತ ಉದ್ಯವರ ಮಸೀದಿಯ ಮುಂಭಾಗಕ್ಕೆ ಹೋಗಿ ಇದೀಗ ಮರೆಯಲಾದ ಪ್ರಾಚೀನ್ ಮುಸ್ಲಿಮ್ ಸೇನಾಧಿಪತಿ ಮತ್ತು ಆತನೇ ಭೂತ ಆರಾಧನೆಗಾಗಿ ನೀಡಿರುವ ಭೂಮಿಯ ಬಗ್ಗೆ ಕೃತಜ್ಞತೆ ಅರ್ಪಿಸಿ ಆತನನ್ನು ಹೊಗಳುವುದು ವಾಡಿಕೆಯಾಗಿದೆ.

ಈ ಪಾಡ್ದಣಗಳು ಸುಮಾರು ಕ್ರಿ.ಶ 11 ರಿಂದ 14ನೇ ಶತಮಾನದಲ್ಲಿ ನಂಬಲಾದ ಪ್ರಮುಖ ಪಾಡ್ದಣಗಳಾದ ಬಲೀಂದ್ರ ಪಾಡ್ದಣ, ಜುಮಾದಿ ದೈವ ಪಾಡ್ದನ ಮತ್ತು ಸಿರಿ ಪಾಡ್ದನ ತುಳುನಾಡಿನ ಬ್ಯಾರಿಗಳ ಬಗ್ಗೆ ಮೈಸಂದಾಯನ ಪಾಡ್ದಣಗಲ್ಲ ಉಲ್ಲೇಖವಿದೆ. 27

ತುಳುನಾಡಿನಲ್ಲಿ ಹಲವಾರು ಪುರಾತನ ಗರಡಿಗಳು (ಭೂತ ಆರಾಧನಾ ಸ್ಥಳಗಳು) ಕೋಟಿ ಚೆನ್ನಯ್ಯರ ಗರಡಿಯಲ್ಲಿ 'ಪಾಪೆ'ಯೆನ್ನುವ ಮೂರ್ತಿಗಳನ್ನು ಕೋಟಿ ಚೆನ್ನಯರ ಪಕ್ಕದಲ್ಲಿ ನಿಲ್ಲಿಸಲಾಗುತ್ತದೆ. ಇದನ್ನು ಮುಖ್ಯವಾಗಿ ಮುಸ್ಲಿಮರನ್ನು ಪ್ರತಿನಿಧಿಕರಿಸಲು ಇರಿಸಲಾಗುತ್ತದೆ ಈ ಗರಡಿಗಳು 17ನೇ ಶತಮಾನದವು. 28

ಮುಲ್ಕಿಯ ಬಪ್ಪನಾಡು ದುರ್ಗಪರಮೇಶ್ವರಿ ದೇವಸ್ಥಾನವು ಜಿಲ್ಲೆಯಲ್ಲಿ ಪ್ರಸಿದ್ಧವಾಗಿದ್ದು 'ಬಪ್ಪ' ಎನ್ನುವುದು ಬಪ್ಪ ಬ್ಯಾರಿಯೆನ್ನುವ ವ್ಯಾಪಾರಿಯ ಹೆಸರಾಗಿದ್ದು ಸ್ಥಳೀಯರ ನಂಬಿಕೆಯಂತೆ ಬಪ್ಪಬ್ಯಾರಿಯೆನ್ನುವ ಮುಸ್ಲಿಂ ವ್ಯಾಪಾರಿ ದುರ್ಗಾಪರಮೇಶ್ವರಿ ದೇವಸ್ಥಾನವನ್ನು ಸುಮಾರು 18ನೇ ಶತಮಾನದ ಕೊನೆಗೆ ಜೀರ್ಣೋದ್ಧಾರ ಮಾಡಿದುದರ ಪ್ರತೀಕವಾಗಿ ದೇವಾಲಯದ ವಾರ್ಷಿಕ ಉತ್ಸವದ ಸಮಯದಲ್ಲಿ ಮುಲ್ಕಿಯಲ್ಲಿರುವ ಬಪ್ಪ ಬ್ಯಾರಿಯ ಹಳೆಯ ಮನೆಯ ಮುಂದೇ ದುರ್ಗಾಪರಮೇಶ್ವರಿಯ ಮೂರ್ತಿ ನಿಂತು ಪ್ರಸಾದ ಅರ್ಪಿಸುವುದು ಹಿಂದಿನಿಂದಲು ಬಂದಿರುವ ರೂಢಿಯಾಗಿದೆ.29

ತುಳುನಾಡಿನ ಹಳೆಯ ಕಾಲದ ರಾಜಧಾನಿ ಬಾರ್ಕೂರಿನ ಭೂತಾಳ ಪಾಂಡ್ಯನ ಕಟ್ಟುಕಟ್ಟಳೆಯಲ್ಲಿ ಮುಸ್ಲಿಮರು ಭೂತಾಳಪಾಂಡ್ಯನ ಮಾನಮಾರ್ಯಾದೆಯ ಒಂದು ಅಂಗವಾಗಿದ್ದು ಬಾರ್ಕೂರಿನ ಐತಿಹಾಸಿಕ ಪಂಚಲಿಂಗೇಶ್ವರ ದೇವಸ್ಥಾನದ ವಾರ್ಷಿಕ ಮೇಳದಲ್ಲಿ 'ಹಂಜಮಾನ'ದ ಹೆಸರಿನಲ್ಲಿ ಫಕೀರ್ ಸಾಹೇಬರ ಕುಟುಂಬಸ್ಥರು ಈಗಲೂ ಮಾರ್ಯಾದೆಯನ್ನು ಸ್ವೀಕರಿಸುತ್ತಾರೆ.30

ಮೆಕೆಂಜಿಯ ಅಭಿಪ್ರಾಯದಂತೆ ಆ ಚಿಕ್ಕ ಊರಲ್ಲಿ 4000 ಮುಸ್ಲಿಂ ಜನಸಂಖ್ಯೆವಿದ್ದರೆಂದು ನಂಬಲರ್ಹವಲ್ಲ ಆದರೆ ಈ ಮಾಹಿತಿಯನ್ನು ಸಂಪೂರ್ಣವಾಗಿ ತಿರಸ್ಕರಿಸಲು ಸಾಧ್ಯವಿಲ್ಲ ಏಕೆಂದರೆ ಅಂದು ಮುಸ್ಲಿಮರು ಮುಖ್ಯ ವ್ಯಾಪಾರಿಗಳಾಗಿ ತುಳು ಸಮುದಾಯದ ಭಾಗವಾಗಿದ್ದು ಕ್ರಿ.ಶ. 1175 ರಲ್ಲಿ ತುಳುನಾಡಿನಲ್ಲಿ ಮುಸ್ಲಿಮರ ಸ್ಥಾನಮಾನದ ಕುರಿತಾಗಿ ಈ ದಾಖಲೆಯು ಕುರುಹು ನೀಡುತ್ತದೆ.31

ಜಿಲ್ಲೆಯ ಜನಪದ ಸಾಹಿತ್ಯಗಳಲ್ಲಿ ಮಸೀದಿಗಳ ಬಗ್ಗೆ ಉಲ್ಲೇಖವಿದ್ದು ಮುಸ್ಲಿಮರು 'ಕುರ್‌ಅನ್' ನನ್ನು ಅಧ್ಯಯನ ಮಾಡುತ್ತಿದ್ದಾರೆಂದು ತಿಳಿಸುತ್ತದೆ. ಕೇರಳದಲ್ಲಿ ದೊರತಿರುವ ಅಪ್ರಕಟಿತ ಅರಬೀ ಭಾಷೆಯ ದಾಖಲೆ ಪ್ರಕಾರ ತುಳುನಾಡು ಎಂದರೆ ದಕ್ಷಿಣ ಕನ್ನಡದ ಪ್ರಥಮ ಮಸೀದಿಯು ಮಾಲಿಕ್ ಇಬ್ನು ಹಬೀಬ್‌ರಿಂದ ಬಾರಕೂರಿನಲ್ಲಿ ನಿರ್ಮಾಣವಾಯಿತು ಎಂದು ದಾಖಲಿಸಿದೆ. 32

13ನೇ ಶತಮಾನದಲ್ಲಿ ಮಂಗಳೂರಿಗೆ ಭೇಟಿ ನೀಡಿದ ಮಾರ್ಕೋ ಪೋಲೋ ಈ ಪ್ರದೇಶದಲ್ಲಿ ಮುಸ್ಲಿಂ ವರ್ತಕರಿದ್ದು ಅವರು ತಮ್ಮದೇಆದ ಭಾಷೆಯನ್ನಾಡುತ್ತಾರೆ. ಹಾಗೂ ಚೀನಾದೊಂದಿಗೆ ವ್ಯಾಪಾರ ನಡೆಸುತ್ತಿರೆಂದು ತಿಳಿಸಿದ್ದಾನೆ. 33

ಕ್ರಿ.ಶ. 1510 ರಲ್ಲಿ ಬಾರ್ಬೋಸಾ ಮಂಗಳೂರಿನಲ್ಲಿ ಮುಸ್ಲಿಂ ವರ್ತಕರ ಕುರಿತು ತಿಳಿಸುತ್ತಾ ಇಲ್ಲಿ ಐಡನ್ನಿಗೆ ಮೂರರು (ಮಹಮದಿಯರು) ಹಡಗುಗಳಲ್ಲಿ ಮೆಣಸನ್ನು ರವಾನಿಸುತ್ತಿದ್ದರಂದು ತಿಳಿಸಿದ್ದಾನೆ. ಪೋರ್ಚುಗೀಸ್ ಮತ್ತು ಆಂಗ್ಲ ದಾಖಲೆಗಳಲ್ಲಿ ಮಂಗಳೂರಿನ ಮುಸ್ಲಿಮರ ವ್ಯಾಪಾರದ ಕುರಿತಾಗಿ ತಿಳಿಸುತ್ತದೆ ಕ್ರಿ.ಶ. 1743 ರಲ್ಲಿ ಆಂಗ್ಲ ಪತ್ರ ದಾಖಲೆಯಲ್ಲಿ ಬಪ್ಪಬ್ಯಾರೀ, ಹಮ್ಮು ಬ್ಯಾರೀಗಳೆಂಬ ವ್ಯಾಪಾರಸ್ಥರ ಕುರಿತು ಉಲ್ಲೇಖವಿದೆ. 34

ಕಡತಗಳಲ್ಲಿ ಬ್ಯಾರಿಗಳ ಕುರಿತಾಗಿ ಕಪ್ಪು ಬಟ್ಟೆಯ ಮೇಲೆ ಸೀಸದ ಕಡ್ಡಿಯಿಂದ ಬರೆದ ದಾಖಲೆ ಪ್ರಮುಖ ಸ್ವದೇಶಿ ದಾಖಲೆ ಪತ್ರವಾಗಿದೆ. ಇದನ್ನು ಕಡತವೆಂದು ಕರೆಯುತ್ತಾರೆ ಈ ಕಡತಗಳಲ್ಲಿ ಬ್ಯಾರಿಗಳು ವ್ಯಾಪಾರಸ್ಥರಾಗಿ ಕೆಲವು ಸಂದರ್ಭಗಳಲ್ಲಿ ನೌಕ ನಡೆಸುವ ಅಧಿಕಾರಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಹಲಸನಾಡು ದಾಖಲೆಗಳಲ್ಲಿ ವ್ಯಾಪಾರಿಗಳಾಗಿ ಇವರು ಕಾಸರಗೋಡು, ಮಂಜೇಶ್ವರ ಮತ್ತು ಮಂಗಳೂರಿಗೆ ಬಂದು ಬಸ್ರೂರುರಿನಲ್ಲಿ ವ್ಯಾಪಾರ ನಡೆಸುತ್ತಿದ್ದರು. ಎಂದು ಈ ದಾಖಲೆಗಳಲ್ಲಿ ನಮೂದಿಸಲಾಗಿದೆ. 35

ಕ್ರಿ.ಶ. 1704 ರ ಕಡತದಲ್ಲಿ ಪೊಕಚು ಬ್ಯಾರಿಯು ಕೆಳದಿ ಅರಸರ ಸೈನಿಕ ನಾಯಕನಾಗಿದ್ದು ಮಲಬಾರಿನಲ್ಲಿ ನಡೆದ ಯುದ್ಧದಲ್ಲಿ ಸಾಕಷ್ಟು ಸಂಕಷ್ಟಪಟ್ಟಿದ್ದನ್ನು ತಿಳಿದು ಕೆಳದಿ ಬಸಪ್ಪನಾಯಕನು ಪೊಕಚು ಬ್ಯಾರಿಗೆ ಸಹಾಯ ನೀಡಿದನು. ಕ್ರಿ.ಶ. 1745-1748 ರ ಕಡತಗಳಲ್ಲಿ ಹಲವಾರು ಬ್ಯಾರಿಗಳು ಶ್ರೀಮಂತ ವ್ಯಾಪಾರಸ್ಥರಾಗಿದ್ದು ತಮ್ಮ ವ್ಯಾಪಾರದ ಲಾಭದ ಅಂಶವನ್ನು ಶ್ರೀಮದನಂತೇಶ್ವರ ದೇವಾಲಯಕ್ಕೆ ನೀಡುತ್ತಿದ್ದರೆಂದು ತಿಳಿಸುತ್ತದೆ. 36

**ಪರಾಮರ್ಶನ ಗ್ರಂಥಗಳು :-**


1. ಡಾ. ವಹಾಬ್ ದೊಡ್ಡಮನೆ – ತುಳುನಾಡಿನ ಮುಸ್ಲಿಮರು – ಪುಟ ಸಂಖ್ಯೆ 28
2. ಅದೇ – ಪುಟ ಸಂಖ್ಯೆ 28
3. ಅದೇ – ಪುಟ ಸಂಖ್ಯೆ 30
4. ಅದೇ – ಪುಟ ಸಂಖ್ಯೆ 31
5. ಅದೇ – ಪುಟ ಸಂಖ್ಯೆ 32
6. ಅದೇ – ಪುಟ ಸಂಖ್ಯೆ33
7. ಅದೇ – ಪುಟ ಸಂಖ್ಯೆ 34
8. ಅದೇ – ಪುಟ ಸಂಖ್ಯೆ 30
10. ಅದೇ – ಪುಟ ಸಂಖ್ಯೆ 32
11. ಪ್ರೋ.ಬಿ.ಎಂ.ಇಚ್ಲಂಗೋಡು – ತುಳುನಾಡಿನ ಬ್ಯಾರಿಗಳು – ಪುಟ ಸಂಖ್ಯೆ 17
12. ಅದೇ – ಪುಟ ಸಂಖ್ಯೆ 18
13. ಅದೇ – ಪುಟ ಸಂಖ್ಯೆ 19
14. ಅದೇ – ಪುಟ ಸಂಖ್ಯೆ 20
15. ಡಾ. ವಹಾಬ್ ದೊಡ್ಡಮನೆ – ತುಳುನಾಡಿನ ಮುಸ್ಲಿಮರು – ಪುಟ ಸಂಖ್ಯೆ 28
16. ಅದೇ – ಪುಟ ಸಂಖ್ಯೆ 29
17. ಅದೇ – ಪುಟ ಸಂಖ್ಯೆ 28
18. ಅದೇ – ಪುಟ ಸಂಖ್ಯೆ30
19. ಅದೇ – ಪುಟ ಸಂಖ್ಯೆ 34
20. ಅದೇ – ಪುಟ ಸಂಖ್ಯೆ 33
21. ಅದೇ – ಪುಟ ಸಂಖ್ಯೆ 32
22. ಅದೇ – ಪುಟ ಸಂಖ್ಯೆ 31
23. ಅದೇ – ಪುಟ ಸಂಖ್ಯೆ 18
24. ಅದೇ – ಪುಟ ಸಂಖ್ಯೆ 19
25. ಅದೇ – ಪುಟ ಸಂಖ್ಯೆ 20
26. ಅದೇ – ಪುಟ ಸಂಖ್ಯೆ 34

27. ಅದೇ – ಪುಟ ಸಂಖ್ಯೆ 32

28. ಅದೇ – ಪುಟ ಸಂಖ್ಯೆ 31

29. ಅದೇ – ಪುಟ ಸಂಖ್ಯೆ 30

30. ಅದೇ – ಪುಟ ಸಂಖ್ಯೆ 33

31. ಪ್ರೊ.ಬಿ.ಎಂ.ಇಚ್ಲಂಗೋಡು – ಪೆರಿಮೆ – ಪುಟ ಸಂಖ್ಯೆ 48

32. ಅದೇ – ಪುಟ ಸಂಖ್ಯೆ 49

33. ಡಾ. ಕೆ.ಎಮ್. ಲೋಕೇಶ್ – ಪೆರಿಮೆ – ಪುಟ ಸಂಖ್ಯೆ 18

34. ಡಾ. ಕೆ.ಜಿ. ವಸಂತ ಮಾದವ – ಪೆರಿಮೆ – ಪುಟ ಸಂಖ್ಯೆ 28

35. ಅದೇ – ಪುಟ ಸಂಖ್ಯೆ 29

36. ಅದೇ – ಪುಟ ಸಂಖ್ಯೆ 30

# ಅಧ್ಯಾಯ – 3

## ಬ್ಯಾರಿ ಸಮುದಾಯದ ಮೂಲ

ಕರಾವಳಿಯ ಅವಿಭಾಜಿತ ದ.ಕ. ಜಿಲ್ಲೆ ಮತ್ತು ಕಾಸರಗೋಡು ಪ್ರದೇಶದ ಜನರಾಡುವ ಭಾಷೆಗಳಲ್ಲಿ ಒಂದು ಪ್ರಮುಖವಾದ ಭಾಷೆ 'ಬ್ಯಾರಿ' ಭಾಷೆ. ಪ್ರಾದೇಶಿಕವಾಗಿ ಪ್ರಜ್ವಲವಾದ ಭಾಷೆ 'ತುಳು' ಮತ್ತು ಈ ಪ್ರದೇಶಕ್ಕೆ 'ತುಳುನಾಡು' ಎಂದು ಗುರುತಿಸಲಾಗಿದೆ.

ಭಾಷಾ ವಿಜ್ಞಾನಿ ಡಾ. ರಾಬರ್ಟ್ ಕಾರ್ಡ್‌ವೆಲ್ ಅವರು ತೌಲನಿಕ ದ್ರಾವಿಡ ವ್ಯಾಕರಣದಲ್ಲಿ ದ್ರಾವಿಡ ಭಾಷೆ ಕುಟುಂಬದಲ್ಲಿ ಚೆನ್ನಾಗಿ ಬೆಳೆದ ಭಾಷೆ 'ತುಳು' ಎಂದು ತಿಳಿಸಿದ್ದಾರೆ. ಈ ರೀತಿಯಲ್ಲಿ ವ್ಯಾಕರಣವನ್ನು ಹೊಂದಿರುವ ಒಂದು ಭಾಷೆ ಬ್ಯಾರಿ ಭಾಷೆ ಎಂಬುದನ್ನು ಡಾ.ಸುಶೀಲ ಉಪಾಧ್ಯಾಯರು ತಿಳಿಸಿದ್ದಾರೆ. ತುಳು ಭಾಷೆಗೆ ಮೌಲ್ಯವನ್ನು ತಂದು ಕೊಟ್ಟವರು 19ನೇ ಶತಮಾನದ ಜರ್ಮನ್ ಮಿಶನರಿಗಳು. ಆದರೆ ಬ್ಯಾರಿ ಭಾಷೆಗೆ ಸಾಹಿತ್ಯಿಕ ಮೌಲ್ಯ ನೀಡಿದ ಕೇರಳದ  ಮಲಬಾರಿನಿಂದ ಬಂದ ಮುಸ್ಲಿಂ ಮಿಶನರಿಗಳು. ಮಲೆಯಾಳ ಪ್ರಭಾವವನ್ನು ಹೊಂದಿದ ಕಾರಣದಿಂದಾಗಿ ಬ್ಯಾರಿ ಭಾಷೆ ಸ್ವಂತ ಅಸ್ತಿತ್ವವನ್ನು ಕಳೆದು ಪ್ರಾದೇಶಿಕ ಸ್ಥಿರತೆಯನ್ನು ಕಳೆದುಕೊಳ್ಳುವಂತಾಯಿತು. ಇದನ್ನು "ಮಾಪ್ಲಾ" ಭಾಷೆಯಿಂದ ಎಂದು ಅಥವಾ 'ಮಲಾಮೆ'ವೆಂದು 'ಮಲಬಾರ್' ಮಲೆಯಾಳವೆಂದು ಅಥವಾ 'ನಕ್–ನಿಕ್' ಭಾಷೆಯೆಂದು ಕರೆಯಲಾಗಿದೆ. ಆರಂಭದ ಹಂತದಲ್ಲಿ ಕಾಣಿಸಿಕೊಂಡ ಧಾರ್ಮಿಕ ಸಾಹಿತ್ಯಗಳು ಮತ್ತು ಮಾಪ್ಲಾ ಪಾಟ್ಟುಗಳು ಅರಬೀ ಲಿಪಿಯಲ್ಲಿ ಬರೆಯಲಾಗುತ್ತಿತ್ತು. ಹಾಗೂ ಅರಬೀ ಮಲೆಯಾಳವೆಂಬ ಹೆಸರಿನಲ್ಲಿ ಬ್ಯಾರಿ ಭಾಷೆಯನ್ನು ಗುರುತಿಸಲಾಗಿತ್ತು. ೨೦ನೇ ಶತಮಾನದ ಮಧ್ಯಭಾಗದವರೆಗೂ 'ಬ್ಯಾರಿ' ಭಾಷೆಗೆ ಸ್ವತಂತ್ರವಾದ ಅಸ್ತಿತ್ವವಿದೆಯೆಂಬ ಕಲ್ಪನೆಯೇ ಇರದೇ, ಈ ಭಾಷೆಯನ್ನಾಡುವ ಜನಾಂಗ ಬ್ಯಾರಿಗಳೆಂದು ಗುರುತಿಸಲು ಹಿಂಜರಿಯುವಂತಾಗಿತ್ತು.1

ಬ್ಯಾರಿಗಳಿಗೂ ಇತರ ಜನಾಂಗಗಳಂತೆಯೇ ಪ್ರತ್ಯೇಕ ಅಸ್ತಿತ್ವವನ್ನು ಗೌರವವಿದೆಯೆಂಬುದನ್ನು ಮೊದಲು ಪ್ರತಿಪಾದಿಸಿದವರು ಪ್ರೋ. ಬಿ.ಎಂ.ಇಚ್ಲಂಗೋಡು. ಬ್ಯಾರಿ ಭಾಷೆಗೆ ಸ್ವಂತಿಕೆಯಿದೆ ಎಂಬ ಕಲ್ಪನೆಗೆ ಒತ್ತು ನೀಡಿದ್ದು ಡಾ. ಸುಶೀಲ ಉಪಾಧ್ಯಾಯರವರ ಸಂಶೋಧನೆ. ಬ್ಯಾರಿ ಸಂಶೋಧನೆ.2

ದಕ್ಷಿಣ ಕನ್ನಡದ ಮುಸ್ಲಿಂ ರಲ್ಲಿ ಬ್ಯಾರಿ ಜನಾಂಗವೂ ಒಂದು. ಇಲ್ಲಿನ ಮುಸ್ಲಿಮರಲ್ಲಿ ೮೦% ರಷ್ಟು ಮಂದಿ ಬ್ಯಾರಿಗಳಾಗಿದ್ದು ಇವರಾಡುವ ಭಾಷೆಯು ಬ್ಯಾರಿಯಾಗಿದೆ. ಉಡುಪಿ, ಹಾಸನ, ಚಿಕ್ಕಮಗಳೂರು, ಕೊಡಗು, ಶಿವಮೊಗ್ಗ, ಬೆಂಗಳೂರು, ಮೈಸೂರು, ಮಂಜೇಶ್ವರ, ಮುಂಬೈ, ಪೋರ್‌ಬಂದರ್ ಸಹಿತ ದೇಶ ವಿದೇಶದ ನಾನಾ ಭಾಗಗಳಲ್ಲಿ ಇಂದು ಬ್ಯಾರಿಗಳು ನೆಲೆಸಿದ್ದಾರೆ.

ಈ ಬ್ಯಾರಿ ಜನಾಂಗದ ಮೂಲ ಯಾವುದು? ಬ್ಯಾರಿ ಪದ ಯಾವಾಗ? ಎಲ್ಲಿ? ಹೇಗೆ? ಉಗಮವಾಯಿತೆಂಬ ಪ್ರಶ್ನೆಗಳಿಗೆ ಇತ್ತೀಚಿನ ಹಲವು ಸಂಶೋಧನೆಗಳು, ಲೇಖನಗಳು ಲಭ್ಯವಿರುವ ದಾಖಲೆಗಳ ಪರಿಶೀಲನೆಯ ಆಧಾರದಲ್ಲಿ ಅಧ್ಯಯನ ಮಾಡಬಹುದು. ಈ ನೆಲೆಯಲ್ಲಿ ನೂರಾರು ವರ್ಷಗಳ ಹಿಂದೆ ಬ್ಯಾರಿ ಮುಸ್ಲಿಂಮರು ತಮ್ಮ ಹೆಸರಿನ ಮುಂದೆ 'ಬ್ಯಾರಿ'ಯೆಂದು ಬಳಸುತ್ತಿದ್ದರು. ಅದು ಗೌರವದ ಪ್ರತೀಕವೂ ಆಗಿತ್ತು. ಉದಾ :– ಮಹಮ್ಮದ್ ಬ್ಯಾರಿ, ಶೇಖಬ್ಬ ಬ್ಯಾರಿ, ಖಾದರ್ ಬ್ಯಾರಿ, ಖಾದ್ರಿ ಬ್ಯಾರಿ ಎಂಬ ನಾಮದಲ್ಲಿ ಕರೆದುಕೊಳ್ಳುತ್ತಿದ್ದರು.

ಬ್ಯಾರಿಗಳ ಸಂಖ್ಯೆ ಅಧಿಕವಿತ್ತು. ಅಲ್ಲದೆ ಬ್ಯಾರಿ ಭಾಷೆಯನ್ನು ನಕ್ಕ್-ನಿಕ್ಕ್ ಭಾಷೆಯೆನ್ನುತ್ತಿದ್ದರು. ಇವರ ಪೀಳಿಗೆಯು ಬ್ಯಾರಿ ಬಾಷೆಯನ್ನು ನಕ್ಕ್ -ನಿಕ್ಕ್ ಭಾಷೆಯೆಂದೇ ಪರಿಗಣಿಸಿದೆ. ಇವರ ಪೀಳಿಗೆಯ ಬ್ಯಾರಿ ಭಾಷೆಯನ್ನು ನಕ್ಕ್-ನಿಕ್ಕ್ ಭಾಷೆಯೆಂದೇ ಪರಿಗಣಿಸಲಾಗಿದೆ.3

ಬ್ಯಾರಿಯೆಂಬುವುದು ಸ್ಥಳೀಯ ತುಳು ಭಾಷೆಯ ಪದ. ವ್ಯಾಪಾರಕ್ಕೆ ತುಳುವಿನಲ್ಲಿ ಬ್ಯಾರ ಮತ್ತು ವ್ಯಾಪಾರಿಗೆ ಬ್ಯಾರಿಯೆನ್ನುತ್ತಾರೆ. ತುಳು ಭಾಷೆಯ ಅರ್ಧದಷ್ಟು ಶಬ್ದಗಳು ಬ್ಯಾರಿ ಭಾಷೆಯಲ್ಲದೆ ಉಚ್ಚರಣಾ ಶೈಲಿ ಕೂಡಾ ತುಳು ಭಾಷೆಯನ್ನು ಹೋಲುತ್ತದೆ. ಮಲಯಾಳಂ ಭಾಷೆಯ ಪ್ರಭಾವವೂ ಬಹಳಷ್ಟು ಇದೆ. ಅರಬೀ, ಕನ್ನಡ, ಕೊಡವ, ಉರ್ದು, ಕೊಂಕಣಿ ಭಾಷೆಯ ಶಬ್ದಗಳು ಬ್ಯಾರಿ ಭಾಷೆಯಲ್ಲಿವೆ. ಸಂಸ್ಕೃತದ ವ್ಯವಹಾರಿ ಅಥವಾ ಕನ್ನಡದ ವ್ಯಾಪಾರಿ ಎಂಬ ಪದಕ್ಕೆ 'ಬ್ಯಾರಿ' ಪದ ಹತ್ತಿರವಾಗಿದೆ. ಕಿಟೆಲ್‌ರವರ ಇಂಗ್ಲಿಷ್ ಕನ್ನಡ ನಿಘಂಟುವಿನಲ್ಲಿ ಬ್ಯಾರಿವೆಂಬ ಪದಕ್ಕೆ ಮಲಯಾಳಂ ಭಾಷೆಯನ್ನು ಆಡುವ ಜನವೆಂಬ ಅರ್ಥವಿದೆ. ಇವೆಲ್ಲ ಬ್ಯಾರಿ ಭಾಷೆಯ ಮೇಲೆ ಇತರ ಭಾಷೆಯ ಪ್ರಭಾವ ಎಷ್ಟಿದೆಯೆಂಬುದನ್ನು ತೋರಿಸುತ್ತದೆ. ಬಹರಿ ಅಥವಾ ಬೆಹಾರಿ (ಸಮುದ್ರಯಾನಿ) ವೆಂಬ ಪದದಿಂದ ಬ್ಯಾರಿವೆಂಬ ಪದ ಬಳಕೆಗೆ ಬಂದಿದೆ ಎಂಬ ಅಭಿಪ್ರಾಯವಿದೆ.4

ಉಡುಪಿ ಮತ್ತು ದ.ಕ. ಜಿಲ್ಲೆ ಹಾಗೂ ಮಂಜೇಶ್ವರವನ್ನು ಒಳಗೊಂಡ ಕರಾವಳಿಯ ಬಹುತೇಕ ಮುಸ್ಲಿಂಮರು ಬ್ಯಾರಿಗಳಾಗಿದ್ದಾರೆ. ಆದರೆ ದಕ್ಷಿಣ ಭಾರತದ ಕನ್ಯಾಕುಮಾರಿಯಿಂದ ಉತ್ತರ ಭಾರತದ ಗುಜರಾತಿನವರೆಗೂ ಸಮುದ್ರ ಕಿನಾರೆಯಲ್ಲಿ ಮುಸ್ಲಿಂಮರು ನೆಲೆಸಿದ್ದು ಅವರು ಮೂಲತಃ ಸಮುದ್ರಯಾನಿಗಳು (ಅರಬರು) ವೆಂದು ಒಪ್ಪಿಕೊಂಡ ಮೇಲೆ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಸೀಮಿತ ಕರಾವಳಿ ಪ್ರದೇಶದ ಮುಸ್ಲಿಮರಿಗೆ ಮಾತ್ರ 'ಬ್ಯಾರಿ'ಯೆಂಬುದಾಗಿ ಕರೆಯಲಾಗಿದೆ. ಕೇರಳದ ಮಲಪ್ಪುರಂ ಜಿಲ್ಲೆಯಿಂದ ಉತ್ತರಕ್ಕೆ ಮಲಬಾರ್‌ವೆಂಬ ಹೆಸರಿದೆ. ಮಲಪ್ಪುರಂ, ಕಣ್ಣೂರು, ಕಾಸರಗೋಡು ಜಿಲ್ಲೆಗಳನ್ನು ಒಳಗೊಂಡ ಈ ಪ್ರಧೇಶವನ್ನು ಭಾಷಾ ರಾಜ್ಯಗಳಾಗಿ ವಿಂಗಡಿಸುವುದಕ್ಕೆ ಮೊದಲು ಮಲಬಾರ್ ಪ್ರದೇಶವೆಂದು ಹೆಸರಿತ್ತು. ಅರಬರು ಕೂಡ ಈ ಪ್ರದೇಶವನ್ನು ಮಲಬಾರ್ ಎಂದೇ ಕರೆಯುತ್ತಿದ್ದರು.

ಈ ಪ್ರದೇಶಕ್ಕೆ ಹತ್ತಿರವಾಗಿರುವ ದಕ್ಷಿಣ ಕನ್ನಡ ಜಿಲ್ಲೆಗೆ ಮಲಬಾರಿನ ಮುಸ್ಲಿಂಮರು ವಲಸೆ ಬಂದು ನೆಲೆಸಿರುತ್ತಾರೆ. ಹೀಗೆ ಬಂದ ಮಲಬಾರಿ ಮುಸಲ್ಮಾನರು ಇಲ್ಲಿನ ತುಳುವರು ಬ್ಯಾರಿಗಳೆಂದು ಸಂಭೋಧಿಸಿದ್ದಾರೆಂದು ಲೇಖಕ ಸಾಲೆತ್ತೂರು ಅಬೂಬಕ್ಕರ್ ಫೈಝಿ ಅಭಿಪ್ರಾಯ ಪಟ್ಟಿದ್ದಾರೆ.5

ಕೇರಳದ ಮಲಬಾರ್ ಪ್ರಾಂತ್ಯದಲ್ಲಿ ವಾಸವಾಗಿರುವ ಮುಸ್ಲಿಂಮರನ್ನು ಮಾಪ್ಲಾಗಳೆಂದು ಕರೆಯಲಾಗಿದೆ. ಈ ಮಾಪ್ಲಾಗಳೇ ವ್ಯಾಪಾರ ನಿಮಿತ್ತ ತುಳುನಾಡಿಗೆ ಬಂದು ನೆಲೆಯೂರಿ ಇಲ್ಲಿನ ಸ್ತ್ರೀಯರನ್ನು ಮದುವೆಯಾಗಿ ಬ್ಯಾರಿಗಳೆಂದು ಗುರುತಿಸಿಕೊಂಡರು ಎಂದು ಖ್ಯಾತ ಸಾಹಿತಿ ಫಕೀರ್ ಮಹಮ್ಮದ್ ಕಟ್ಪಾಡಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.6

ಸಂಶೋಧಕರಾದ ಪ್ರೊ. ಬಿ.ಎಂ. ಇಚ್ಲಂಗೋಡು ಮತ್ತು ಡಾ. ವಹಾಬ್ ದೊಡ್ಡಮನೆ ಮತ್ತು ಮೈಕಾಲ ಕೃತಿಯನ್ನು ರಚಿಸಿದ ಅಹ್ಮದ್ ನೂರಿಯವರು ಬ್ಯಾರಿಯೆಂಬ ಪದ ತುಳುನಾಡಿನ ಬ್ಯಾರದಿಂದ ಬಂದಿದೆಯೆಂದು ಅಭಿಪ್ರಾಯ ಪಡುತ್ತಾರೆ. ಪಶ್ಚಿಮ ಕರಾವಳಿ ಪ್ರದೇಶದ ದಖ್ಖನಿ ಅಥವಾ ತುರ್ಕರು ಬ್ಯಾರಿಗಳನ್ನು ಈಗಲೂ ಮಲೆಬಾರಿಯೆಂದೇ ಕರೆಯುತ್ತಿದ್ದು ಈ ಮಲಬಾರಿ ಪದದ ಕೊನೆಯಲ್ಲಿ 'ಬಾರಿ' ಎಂಬ ಪದ ಬ್ಯಾರಿಯಾಗಿರಬಹುದೆಂದು ಇತಿಹಾಸಗಾರರು ಅಭಿಪ್ರಾಯ ಪಟ್ಟಿದ್ದಾರೆ. ಒಟ್ಟಿನಲ್ಲಿ ಬ್ಯಾರಿ ಎಂಬ ಪದ ತುಳು ಭಾಷೆಯಾಗಿದ್ದು ವ್ಯಾಪಾರಕ್ಕೆ ತುಳುವಿನಲ್ಲಿ ಬ್ಯಾರ ಮತ್ತು ವ್ಯಾಪಾರಿಗೆ ಬ್ಯಾರಿ ಎನ್ನಲಾಗಿದ್ದು, ಇದು ತುಳುವರು ಬ್ಯಾರಿಗಳಿಗೆ ಕೊಟ್ಟ ಗೌರವ ಸೂಚಕ ಪದವಾಗಿದೆಯೆಂದು ಹೇಳಲಾಗಿದೆ. ಇದಕ್ಕೆ ಸಾಕ್ಷಿ ಶತಮಾನಗಳ ಹಿಂದೆ ಇಲ್ಲಿನ ಮುಸ್ಲಿಮರ ಹೆಸರಿನ ಮುಂದೆ ಬ್ಯಾರಿ ಮತ್ತು ಬ್ಯಾರ್ದಿಯೆಂಬ ಪದ ಬಳಕೆಯಾಗಿರುವುದು ಹಾಗೂ ಸರ್ಕಾರಿ ಕಡತಗಳಲ್ಲೂ ಕೂಡ ಇವರ ಹೆಸರಿನ ಮುಂದೆ ಬ್ಯಾರಿಯೆಂದು ನಮೂದಿಸಲ್ಪಟ್ಟಿರುವುದು ಕಂಡು ಬರುತ್ತದೆ. ಇತಿಹಾಸಕಾರ ಬಿ.ಎ. ಸಾಲೆತ್ತೂರು ಅವರು ತುಳು ಮಾಪಿಳ್ಳೆಗಳು (ಬ್ಯಾರಿಗಳು) ಅರಬ್ಬೀ ತಂದೆಗೆ ಮತ್ತು ತುಳು ತಾಯಿಗೆ ಹುಟ್ಟಿದ ಮಕ್ಕಳು ಎಂಬುದಾಗಿ ದಾಖಲಿಸುತ್ತಾರೆ. ಇದು ಬ್ಯಾರಿ ಜನಾಂಗದ ಅಸ್ತಿತ್ವದ ಕಾಲಘಟ್ಟವನ್ನು ಸೂಚಿಸುತ್ತದೆ. ಬ್ಯಾರಿಗಳು ಧಾರ್ಮಿಕವಾಗಿ ಇಸ್ಲಾಂ ಧರ್ಮದವರನ್ನು ಅಂಗೀಕರಿಸಿದ್ದರು. ಅವರ ಆಚಾರ ವಿಚಾರದಲ್ಲಿ ತುಳು ಸಂಸ್ಕೃತಿಗಳು ಸೇರ್ಪಡೆಗೊಂಡಿರುವುದನ್ನು ಕಾಣಬಹುದು.7

ಭಾಷಾ ತಜ್ಞರು ದ್ರಾವಿಡ ಭಾಷೆಯೆಂದು ಗುರುತಿಸಿದ್ದು ಮೂಲ ಭಾಷೆ ತಮಿಳು ಕ್ರಿ.ಶ. 6ನೇ ಶತಮಾನದಲ್ಲಿ ಸಂಗಂ ಸಾಹಿತ್ಯವಾಗಿ ಖ್ಯಾತಿ ಪಡೆದ ತಮಿಳು ಭಾಷೆ ಪ್ರಾಚೀನವಾಗಿದ್ದು ಸಂಸ್ಕೃತದ ಪ್ರಭಾವ ಇಲ್ಲದೆಯೇ ತಮಿಲಗಂ ಅಥವಾ (ಚೆಂತಮಾಲ್)ವೆಂಬ ಸ್ವತಂತ್ರ ಭಾಷೆಯಾಗಿ ಸಂಸ್ಕೃತ ಭಾಷೆಗೆ ಸರಿಸಮಾನವಾದ ಮಹಾ ಕಾವ್ಯಗಳನ್ನು ನೀಡಿದೆ. ದ್ರಾವಿಡ ಭಾಷೆಯಿಂದ ಕವಲೊಡೆದು ಪ್ರತ್ಯೇಕಿಸಲ್ಪಟ್ಟು ಸ್ವತಂತ್ರವಾಗಿ ಬೆಳೆದು ಬಂದ ಭಾಷೆಯನ್ನು ದ್ರಾವಿಡ ಭಾಷೆಯೆಂದು ಭಾಷಾ ತಜ್ಞರು ಗುರುತಿಸಿದ್ದಾರೆ. ದ್ರಾವಿಡ ಭಾಷಾ ಗುಂಪಿನಲ್ಲಿ ಐದು ಭಾಷೆಗಳಿದ್ದು, ಇವುಗಳನ್ನು ಪಂಚ ದ್ರಾವಿಡ ಭಾಷೆಯೆಂದೇ ಗುರುತಿಸಲಾಗಿದೆ. ಅವುಗಳು ತಮಿಳು, ಮಲೆಯಾಳಂ, ಕನ್ನಡ, ಸಂಸ್ಕೃತ, ತೆಲುಗು ಮತ್ತು ತುಳು ಭಾಷೆಗಳಿಗೆ ತಮಿಳಿನ ಪ್ರಭಾವವಿದ್ದು ಇವು ಸ್ವತಂತ್ರವಾಗಿ ಬೆಳೆದಿದೆ. ಆದರೆ ಬ್ಯಾರಿ ಭಾಷೆಯಲ್ಲಿ ಬಹು ಮಟ್ಟಿಗೆ ತಮಿಳು ಪ್ರಭಾವವೇ ಇದ್ದು ಮಲಯಾಲಕ್ಕಿಂತಲೂ ಪ್ರಾಚೀನವಾದ ತುಳು ಭಾಷೆಗೆ ಸಮಾನವಾಗಿ ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ. ಈ ನೆಲೆಯಲ್ಲಿ ಬ್ಯಾರಿ ಭಾಷೆ ದ್ರಾವಿಡ ಗುಂಪಿನ ಭಾಷೆಯೆಂದು ನಿರೂಪಿಸಲು ಮೂಲ ಪದಗಳ ಪದ ಪ್ರಯೋಗ ವಿಧಾನ ಮಾತ್ರವಲ್ಲದೇ ಸಂಸ್ಕೃತ ಭಾಷಾ ಪ್ರಭಾವಿತ ಗಂಥ ಭಾಷೆಯ ಪ್ರಭಾವವೇ ಇಲ್ಲದ ತಮಿಳಿಗೆ ಇತರ ಭಾಷೆಗಳಿಗಿಂತಲೂ ಹತ್ತಿರವಾದ ಸಂಬಂಧವಿರುವ ಬ್ಯಾರಿ ಭಾಷೆಯನ್ನು ದ್ರಾವಿಡ ಭಾಷೆಯ ಗುಂಪಿಗೆ ಸೇರಿಸದಿರುವುದು ಗಮನಾರ್ಹವಾಗಿದೆ. ಈ ಭಾಷೆಯನ್ನು ಭಾಷಾ ತಜ್ಞೆ ಡಾ. ಸುಶೀಲಾ ಉಪಾಧ್ಯಾಯರವರು ಬ್ಯಾರಿ ಭಾಷೆ ಸ್ವತಂತ್ರ ದ್ರಾವಿಡ ಭಾಷೆ ಎಂದು ಗುರುತಿಸದೇ 'ಮಾಪ್ಲಾ ಭಾಷೆ' ಎಂದು ಗುರುತಿಸಿದ್ದಾರೆ.8

ಮೂಲ ದ್ರಾವಿಡ ಭಾಷೆ ತಮಿಳು ಅದರಿಂದ ಕವಲೊಡೆದು ಬಂದ ಭಾಷೆ ಮಲೆಯಾಲ. ಮಲೆಯಾಲದಲ್ಲಿರುವ ಪದಗಳಲ್ಲಿ ಶೇಕಡಾ 80 ರಷ್ಟು ಸಂಸ್ಕೃತ ಪ್ರಭಾವಿತ ಗ್ರಂಥ ಭಾಷೆಯಾಗಿದೆ. ಆದರೆ ತಮಿಳಿನಲ್ಲಿ ಸಂಸ್ಕೃತ ಭಾಷೆಯ ಪ್ರಭಾವವೇ ಇರಲಿಲ್ಲ. ಸಂಗಂ ಸಾಹಿತ್ಯದ ಪ್ರಸಿದ್ಧ ಸಾಹಿತ್ಯವಾದ 'ಸಿಲಪ್ಪದಿಕಾರಂ ಮಹಾ ಕಾವ್ಯವನ್ನು ಬರೆದ ಇಲಂಗೋ ಅಡಿಗಲ್ ಎಂಬುವರು ಕೇರಳ ರಾಜ್ಯ ವ್ಯಾಪ್ತಿಯ ಕೊಚ್ಚಿಯವರು (ಇಂದಿನ ಕೇರಳ ರಾಜ್ಯದ ಬಹುಭಾಗ ಪ್ರಾಚೀನ ಚೇರ ರಾಜ್ಯವಾಗಿತ್ತು) ಇದು ತಿರುವನಂತಪುರ ಕೊಚ್ಚಿ ಪ್ರದೇಶದ ತಮಿಳುನಾಡಿನ ಗಡಿ ಪ್ರದೇಶವಾಗಿದೆ. ಈ ಪ್ರದೇಶದ ಭಾಷೆ ತಮಿಳಿನ ಒಂದು ಪ್ರಭೇದವಾಗಿದೆ.9

ಮಲೆಯಾಳ, ತಮಿಳಿನಿಂದ ಕವಲೊಡೆದ ಭಾಷೆ ಮತ್ತು ಕಾಲ ಕ್ರಮೇಣ ಬಹುಪಾಲು ಸಂಸ್ಕೃತ ಪದಗಳು ಆಯಾಮವಾಗಿ ಮೂಲ ಕ್ರಿಯಾಪದಾಂತ್ಯರೂಪವನ್ನೇ ಬದಲಾಯಿಸಿತು. ಕೇರಳದಿಂದಲೇ ಮಾಲಿಕ್-ಬಿನ್-ದೀನಾರ್ ನೇತೃತ್ವದಲ್ಲಿ ದೀನಾರ್ ಮಿಶನರಿ ಕೂಟವು ಇಸ್ಲಾಂ ಧರ್ಮ ಪ್ರಚಾರವನ್ನು ಆರಂಭಿಸಿದ್ದು ಮಲಯಾಳ ಭಾಷೆ ಈ ಪ್ರಚಾರಕ್ಕೆ ಮಾಧ್ಯಮವಾಗಲು ಸಾಧ್ಯವಾಯಿತು. ಅರಬ್ಬೀ ಪಾರ್ಸಿ ಪದಗಳ ಸೇರ್ಪಡೆಯೂ ಆಯಿತು. ಹೇಗೆ ಮಲಯಾಳ ಭಾಷೆಯ ಉದ್ಭವ ಮತ್ತು ಬೆಳವಣಿಗೆಯನ್ನು ಪರಿಶೀಲಿಸಿದರೆ ಸ್ವಲ್ಪವೂ ಗ್ರಂಥ ಭಾಷಾ ಪ್ರಭಾವವಿಲ್ಲದೇ ಬ್ಯಾರಿ ಭಾಷೆ ಮಲಯಾಳದಿಂದ ಕವಲೊಡೆದುದಲ್ಲ ನೇರವಾಗಿ ತಮಿಳಿನಿಂದಲೇ ಕವಲೊಡೆದು ಬಂದ ಭಾಷೆಯೆಂದು ಸಾಬೀತಾಗಿದೆ. 1890 ರಲ್ಲಿ ಜಿಲ್ಲಾಧಿಕಾರಿಯಾಗಿದ್ದ 'ಕೋಚ್‌ಮನ್'ರಿಂದ ಪ್ರಥಮ ಭೂ ಸರ್ವೇ ನಡೆಯಿತು.

ತುಳುನಾಡ ಬ್ಯಾರಿಗಳ ಹೆಸರು ಮತ್ತು ವಾಸ ಸ್ಥಳಗಳು ಮಾತ್ರವಲ್ಲ ಆರ್ಥಿಕ ಪರಿಸ್ಥಿತಿಗಳ ಕುರಿತಾದ ದಾಖಲೆಗಳಿವೆ. ಉತ್ತರ ಮಲಬಾರಿನಿಂದ ಕಾಸರಗೋಡು, ಬೈಂದೂರಿನವರಿಗೂ ತುಳುನಾಡಾಗಿ ಗುರುತಿಸಲ್ಪಟ್ಟ ಪ್ರದೇಶಗಳಲ್ಲಿ ಬ್ಯಾರಿಗಳಿದ್ದರೆಂದು ತಿಳಿಯಬಹುದಾಗಿದೆ.10

1900 ರಿಂದ ಈಚೆಗೆ ನೊಂದಾಯಿಸಿದ ದಾಖಲೆಗಳ ಪರಿಶೀಲನೆಯಿಂದ ಮಂಗಳೂರು, ಮಂಜೇಶ್ವರ, ಕಾಸರಗೋಡಿನ ನೋಂದಣಿ ಕಚೇರಿಗಳಿಂದ ಬ್ಯಾರಿ ಭೂ ದಾಖಲೆಗಳನ್ನು ಪರಿಶೀಲಿಸಿದರೆ ಬಟ್ಟೆ ಬರಹದ ಸಹಿಯನ್ನು ಕಾಣಬಹುದಾಗಿದೆ. 1937 ರಲ್ಲಿ ಪ್ರಚಲಿತವಿದ್ದ ಶಾರದಾ ಡೈರಿಯಲ್ಲಿ ಬರೆದಿಟ್ಟ ಬಟ್ಟೆ ಬರಹದ ದಾಖಲೆಯನ್ನು ಪ್ರೊ. ಬಿ.ಎಂ. ಇಚ್ಲಂಗೋಡು ಸಂಶೋಧಿಸಿದ್ದಾರೆ. ಆ ಕಾಲದಲ್ಲಿ ಬ್ಯಾರಿಗಳಲ್ಲಿ ಬಳಕೆಯಲ್ಲಿದ್ದ ವ್ಯವಹಾರ ಬರಹ 'ಬಟ್ಟೆಲುತು' ಆಗಿತ್ತು ಈ ಬಟ್ಟೆ ಬರಹ ಮೂಲ ತಮಿಳು ಲಿಪಿಯ ಒಂದು ಪ್ರಭೇದವೇ ಆಗಿತ್ತು.

1820 ರಲ್ಲಿ ಬ್ರಿಟೀಷ್ ಆಡಳಿತ ಈ ಲಿಪಿ ಬಳಕೆಗೆ ನಿಷೇಧ ಹೇರಿತ್ತು. ಬ್ರಿಟಿಷ್ ಆಡಳಿತದಲ್ಲಿ ಮಲೆಯಾಳ ಬೆಳವಣಿಗೆ ಆದಾಗ ಈ ಲಿಪಿಗೆ ಮನ್ನಣೆ ಸಿಗಲಿಲ್ಲ. ಆದರೆ ತುಳು ಲಿಪಿಯಂತೆಯೇ ಬ್ಯಾರಿಗಳಲ್ಲಿ ಈ ಲಿಪಿ ಬಳಕೆ ಉಳಿದಿತ್ತು. ತಮಿಳಿನಿಂದ ಪ್ರತ್ಯೇಕವಾದ ಈ ಲಿಪಿ ಮತ್ತು ಭಾಷೆಯ ಅಸ್ತಿತ್ವವೇ ಬ್ಯಾರಿಗಳ ಪ್ರಾಚೀನತೆಯನ್ನು ಎತ್ತಿ ತೋರಿಸುತ್ತದೆ. ಮಲೆಯಾಳಿಗಳಿಗೆ ಒಲ್ಲದ ಈ ಲಿಪಿ ಬ್ಯಾರಿಗಳಲ್ಲಿ ಮಾತ್ರ ಉಳಿದಿರುವುದು ಬ್ಯಾರಿ ಭಾಷಾ ಮೂಲವನ್ನು ತಿಳಿಯಲು ಸಹಕಾರಿಯಾಗಿದೆ.11

ಬ್ಯಾರಿ ಭಾಷೆಗೂ ದ್ರಾವಿಡ ಭಾಷೆಗೂ ಇರುವ ಸಂಬಂಧವನ್ನು ಕುರಿತಾಗಿ ಸಂಗಂ ತಮಿಳಿನಲ್ಲಿ ಮಹಾಪ್ರಾಣಾಕ್ಷರಗಳಿಲ್ಲ ಅದೇ ರೀತಿ ಬ್ಯಾರಿ ಭಾಷೆಯಲ್ಲಿಯೂ ಮಹಾ ಪ್ರಾಣಾಕ್ಷರಗಳಿಲ್ಲ ಎನ್ನುವುದು ಭಾಷಾ ತಜ್ಞರ ಅಭಿಪ್ರಾಯ. ತಮಿಳಿನಲ್ಲಿ ಗ್ರಂಥ ಭಾಷಾ ಪ್ರಭಾವವೇ ಇಲ್ಲ. ಬ್ಯಾರಿ ಭಾಷೆಯಲ್ಲೂ ಗ್ರಂಥ ಭಾಷಾ ಪ್ರಭಾವವಿಲ್ಲ. ಬದಲಾಗಿ ಅರಬೀ ಪ್ರಭಾವವು ಅರಬೀ ಪದಗಳ ಬಳಕೆಯಾಗಿದೆ. ತಮಿಳಿನಲ್ಲಿ 12 ಸ್ವರಾಕ್ಷರಗಳು ಮತ್ತು 18 ವ್ಯಂಜನಾಕ್ಷರಗಳು ಇವೆ. ಒಟ್ಟು ೩೩ ಅಕ್ಷರಗಳು ಬ್ಯಾರಿ ಪದೋಚ್ಚಾರ'ಗಳು ಸ್ವತಂತ್ರವಾಗಿದೆ. ಬ್ಯಾರಿ ಭಾಷೆ ಜನರಿರುವ ತಮಿಳುನಾಡಿನ ನೆರೆಯಲ್ಲೇ ಮಲಯಾಳಿಗರ ಮಲಬಾರ್ ಇದ್ದು ಆಗಿರಬಹುದೆಂದು ಪ್ರೊ. ಬಿ.ಎಂ. ಇಚ್ಲಾಂಗೋಡು ತಿಳಿಸುತ್ತಾರೆ.12

ಮಲಬಾರಿನ ಮಾಪ್ಲಾಗಳು ತುಳುನಾಡಿನ ಬ್ಯಾರಿಗಳಂತೆಯೇ ಅರಬೀ ಸಂಪರ್ಕದಿಂದ ಹುಟ್ಟುಕೊಂಡ ಜನಾಂಗವಾಗಿದ್ದು ಈ ಜನ ವ್ಯಾಪಾರದಲ್ಲಿ ಚತುರರಾಗಿತ್ತು. ದೀನಿ ಪ್ರಚಾರದಲ್ಲೂ ನಾಯಕತ್ವದಲ್ಲೂ ಪ್ರಾಮುಖ್ಯತೆ ಪಡೆದು ಮಹಾಪಿಳ್ಳೆ, ಮಾಪಿಳ್ಳೆ ಎಂದು ತಮಿಳರಿಂದ ಗುರುತಿಸಲ್ಪಟ್ಟಿದ್ದು ಜಾತಿಯಲ್ಲಿ ಮಾಪ್ಲಾಗಳೂ, ಬ್ಯಾರಿಗಳೂ, ಮುಸ್ಲಿಮರೇ. ಮುಸ್ಲಿಮರಲ್ಲಿ ಗಮನಾರ್ಹ ಉಪಜಾತಿಗಳಲ್ಲಿ ಮಾಪ್ಲಾಗಳು ಇಂದು ಪ್ರಾದೇಶಿಕ ಮುಸ್ಲಿಂ ಜನಾಂಗ ಬ್ಯಾರಿಗಳು ತುಳುನಾಡಿನ ಮುಸ್ಲಿಂ ಜನಾಂಗ ಮಲಬಾರಿನ 'ಮಾಪ್ಲಾಗಳು' ಮಾಪ್ಲಾ ಜಾತಿವೆನ್ನುವಂತೆ ಮಾಡಿದ ಬ್ರಿಟೀಷ್ ಆಡಳಿತ ಮತ್ತು ಮಾಪ್ಲಾಗಳ ಧಾರ್ಮಿಕ ಪ್ರಭಾವದಿಂದ ಬ್ಯಾರಿಗಳು ಈ ಮಾಪ್ಲಾ ಜಾತಿಯನ್ನು ಲೇಪಿಸಿಕೊಂಡರು. ಮೂಲತಃ ಬ್ಯಾರಿ ಜಾತಿಯೆಂದು ಗುರುತಿಸಿಕೊಳ್ಳಲು ವಿಫಲರಾದರು. ಈ ರೀತಿ ಬ್ಯಾರಿಗಳು ಮಾಪ್ಲಾಗಳಲ್ಲವೆಂಬುದನ್ನು ಸಾಕ್ಷ್ಯಾಧಾರಗಳ ಮೂಲತ ಪ್ರೊ. ಬಿ.ಎಂ. ಇಚ್ಲಂಗೋಡು ತುಳುನಾಡ ಬ್ಯಾರಿಗಳು ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.13

ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆ, ಕಾಸರಗೋಡು, ಬೈಂದೂರು ಪ್ರದೇಶಗಳಲ್ಲಿ ಪ್ರಾಚೀನ ತುಳುನಾಡೆಂಬ ನಾಡಿನಲ್ಲಿ ಸ್ಥಳೀಯರಾಗಿ ಬೆಳೆದು ಬಂದ ಮುಸ್ಲಿಂರನ್ನು ಬ್ಯಾರಿಗಳೆಂದು ಕರೆಯುತ್ತಾರೆ. ಹಾಗೂ ೨೦ನೇ ಶತಮಾನದ ಆರಂಭದವರೆಗೂ ಈ ಜನಾಂಗ ನಮ್ಮ ಹೆಸರುಗಳ ಮುಂದೆ ಬ್ಯಾರಿವೆಂಬ ಉಪನಾಮವನ್ನು ಹೆಮ್ಮೆಯಿಂದ ಸಾಂಪ್ರದಾಯಿಕವಾಗಿ ಗೌರವ ಪದವಾಗಿ ಬಳಸುತ್ತಿದ್ದರು.

ಈ ಕರಾವಳಿಯ ಮುಸ್ಲಿಮರಲ್ಲಿ ಬಹಳಷ್ಟು ಜನ ಪ್ರಾಚೀನ ಕಾಲದಿಂದಲೂ ವ್ಯಾಪಾರವನ್ನೇ ಮುಖ್ಯ ಕಸುಬಾಗಿರಿಸಿಕೊಂಡಿದ್ದರಿಂದ ಕಸುಬನ್ನು ಆಧರಿಸಿ ಇವರು ಪಡೆದ ತಮ್ಮ ಕುಲನಾಮವೇ ಬ್ಯಾರಿಗಳು. ಆದರೆ ಬ್ಯಾರಿಯೆಂಬುವುದು ತುಳು ಪದವಾಗಿದ್ದು. ವ್ಯಾಪಾರವನ್ನೇ ಬ್ಯಾರ ಎಂದು ಅದನ್ನೇ ಕಸುಬಾಗಿಸಿದವರನ್ನು ಬ್ಯಾರಿಗಳೆಂದು ಕರೆಯಲಾಗಿದೆ ಎಂದು ಹಲವು ಜನ ಚಿಂತಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.14

ಬ್ಯಾರಿ ಭಾಷೆಯನ್ನು ಆಡುವ ಬ್ಯಾರಿ ಜನಾಂಗದ ಕರ್ನಾಟಕ ರಾಜ್ಯಾದ್ಯಂತ ಹಬ್ಬಿಕೊಂಡಿದ್ದು, ಬ್ಯಾರಿಗಳು ಮುಖ್ಯವಾಗಿ ಕರಾವಳಿಯ ದಕ್ಷಿಣ ಕನ್ನಡ ಮತ್ತು ಉಡುಪಿ, ನೆರೆಯ ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಕೊಡಗು ಜಿಲ್ಲೆಗಳಲ್ಲಿ ಗಣನೀಯ ಸಂಖ್ಯೆಯಲ್ಲಿದ್ದಾರೆ. ಕನ್ನಡ ಭಾಷೆಯಲ್ಲಿ ಕಾಣುವಂತೆ ಬ್ಯಾರಿ ಭಾಷೆಯಲ್ಲೂ ಪ್ರಾದೇಶಿಕವಾಗಿ ಬೇರೆ ಬೇರೆ ಭಾಷಾ ಪ್ರಭೇದಗಳಿವೆ. ಇದು ಮಂಗಳೂರಿನ ಸುತ್ತಮುತ್ತಲಿನ ಬ್ಯಾರಿ ಭಾಷೆ ಹಾಗೂ ಪುತ್ತೂರು, ಸುಳ್ಯ, ವಿಟ್ಲ, ಮಂಜೆಶ್ವರ, ಉಪ್ಪಳ ಪ್ರದೇಶಗಳ ಆಡು ಭಾಷೆಗಳಲ್ಲಿ ವ್ಯತ್ಯಾಸಗಳು ಕಂಡು ಬಂದರೂ ಈ ಭಿನ್ನತೆಗಳು ಭಾಷೆಯ ಸೊಬಗನ್ನು ಹೆಚ್ಚಿಸಿದೆಯೇ ಹೊರತು, ಬ್ಯಾರಿ ಐಕ್ಯತೆ ಮತ್ತು ಭಾಷೆಯ ಬೆಳವಣಿಗೆಗೆ ಮಾರಕವಾಗಿಲ್ಲ. ಬ್ಯಾರಿ ಭಾಷೆ ವಿಶಿಷ್ಟ ಸ್ಥಾನಮಾನ ಹೊಂದಿದ್ದು ಕರಾವಳಿಯ ಸಂಸ್ಕ್ರತಿಗೆ ಅಪಾರವಾದ ಕೊಡುಗೆಯನ್ನು ನೀಡುತ್ತಿದ್ದೆ. ಸಾವಿರಾರು ವರ್ಷಗಳ ಸಂಸ್ಕೃತಿ ಪರಂಪರೆಯನ್ನು ಸಾಗಿ ಬದಲಾಗುತ್ತಿರುವ ಕಾಲ ಮತ್ತು ಮೌಲ್ಯಗಳೊಂದಿಗಿ ತನ್ನ ಭಾಷೆ ಸಂಸ್ಕೃತಿಯನ್ನು ಉಳಿಸಿಕೊಂಡು ಬರುತ್ತಿರುವ ಬ್ಯಾರಿ ಜನಾಂಗ ಕರ್ನಾಟಕದ ಅತ್ಯಂತ ಪ್ರಭಾವಶಾಲಿ ಜನಾಂಗವಾಗಿ ಬೆಳೆದಿದೆ.15

ಹಲವಾರು ವೈಶಿಷ್ಟ್ಯತೆಗಳನ್ನೊಳಗೊಂಡ ಬ್ಯಾರಿ ಭಾಷೆ, ಬ್ಯಾರಿ ಸಮುದಾಯದ ಅಧಿಕೃತ ಭಾಷೆ ಆಗಿದ್ದು ಕಳೆದೆರಡು ದಶಕಗಳಲ್ಲಿ ಬಹಳಷ್ಟು ಬೆಳವಣಿಗೆಯನ್ನು ಕಂಡಿವೆ. ಬ್ಯಾರಿಗಳು ಸ್ಥಳೀಯ ಜನಸಮುದಾಯದವರೊಡನೆ ಸದಾ ಅನ್ಯೋನ್ಯತೆಯಿಂದ ಬಾಳಿ ಬಂದಿರುವವರಾಗಿದ್ದು ಇದರ ಕುರಿತಾಗಿ ಪ್ರಾಚೀನ ಪಾಡ್ದನಗಳ ಕಾಲದಿಂದ ಇಂದಿನವರೆಗೂ ಬ್ಯಾರಿಗಳಿಗೂ ಸ್ಥಳೀಯ ಮುಸ್ಲಿಮೇತರ ಜನರಿಗೂ ಇರುವ ಆತ್ಮೀಯ ಸೌಹಾರ್ದತೆಗೆ ತುಳುನಾಡಿನ ಚರಿತ್ರೆಯಲ್ಲಿ ಕಂಡು ಬರುತ್ತದೆ. ಹಿಂದೂ– ಮುಸ್ಲಿಂ ಐಕ್ಯದ ನಿಕಟ ಬಾಂಧವ್ಯದ ಅತ್ಯುತ್ತಮ ನಿದರ್ಶನಗಳು ಈ ಬ್ಯಾರಿ ಜನಾಂಗದಲ್ಲಿದೆ.16

ಬ್ಯಾರಿ ಭಾಷೆಯ ಇತಿಹಾಸವನ್ನು ಅವಲೋಕಿಸಿದಾಗ ಆ ಭಾಷೆಯ ಪ್ರಾಚೀನತೆ ಮತ್ತು ಸಾಂಸ್ಕೃತಿಕ ಪ್ರಾಧಾನ್ಯವು ಅರಿವಿಗೆ ಬರುವುದು. ಸುಮಾರು 1400 ವರ್ಷಗಳ ದೀರ್ಘ ಇತಿಹಾಸವನ್ನು ಹೊಂದಿರುವ ಬ್ಯಾರಿ ಭಾಷೆಗೆ ಲಿಪಿಯಿಲ್ಲ. ತುಳು, ಕೊಂಕಣಿ, ಕೊಡವ ಭಾಷೆಗಳ ರೀತಿಯಲ್ಲಿ ಜನರ ಆಡು ಭಾಷೆಯಾಗಿ ಮತ್ತು ಸಂಪರ್ಕದ ಭಾಷೆಯಾಗಿ ಬೆಳೆದು ಬಂದಿದ್ದು, ಬ್ಯಾರಿ ಜನಾಂಗದ ಸಾಂಸ್ಕೃತಿಕ ಹಿನ್ನಲೆಯಲ್ಲಿ ಈ ಭಾಷೆ ಇಡೀ ಜನಾಂಗವನ್ನೇ ಪ್ರತಿನಿಧಿಸುತ್ತದೆ.17

ಮಾತೃ ಭಾಷೆ ಬ್ಯಾರಿ ಎನ್ನುವ ಸ್ವಾಭಿಮಾನ ಕಳೆದ ಶತಮಾನಗಳಲ್ಲಿ ಬ್ಯಾರಿ ಜನಾಂಗದಲ್ಲಿ ಬೆಳೆಯತೊಡಗಿದ್ದು. ಪರಂಪರಗತವಾಗಿ ನಡೆದು ಬಂದ ಬ್ಯಾರಿ ಸಂಸ್ಕಾರ ಹಾಗೂ ಭಾಷೆ ಅವಗಣನೆಗೆ ಬಲಿಯಾದ ಕಾಲವಗಿತ್ತು. ಇದರಿಂದ ಎಚ್ಚೆತ್ತಾ ಬ್ಯಾರಿ ಜನಾಂಗದ ಪ್ರಮುಖ ಚಿಂತಕರು, ಲೇಖಕರು ಇತಿಹಾಸಕಾರರು ಬ್ಯಾರಿ ಜನಾಂಗದ ಭಾಷೆ ಮತ್ತು ಸಂಸ್ಕೃತಿಗೆ ವಿಶೇಷ ಸ್ಥಾನಮಾನವನ್ನು ತಂದುಕೊಟ್ಟು ಜನಸಾಮಾನ್ಯರಲ್ಲಿ ಇದರ ಕುರಿತಾಗಿ ಸಕಾಲದಲ್ಲಿ ಅರಿವನ್ನು ಮೂಡಿಸಿದರು.18

7ನೇ ಶತಮಾನದ ಮಧ್ಯ ಅವಧಿಯಲ್ಲಿ ದಕ್ಷಿಣ ಕನ್ನಡ ಕರಾವಳಿಗೆ ಇಸ್ಲಾಂ ಧರ್ಮದ ಪ್ರವೇಶವಾಯಿತೆಂದು ಬಹುತೇಕ ಇತಿಹಾಸ ತಜ್ಞರು ಉಲ್ಲೆಖಿಸಿದ್ದಾರೆ. ವ್ಯಾಪಾರ ಮತ್ತು ವಾಣಿಜ್ಯದ ಉದ್ದೇಶದಿಂದ ಬಂದ ಅರಬರು ಕೇರಳ ಮತ್ತು ಕರ್ನಾಟಕದ ಕರಾವಳಿಯಲ್ಲಿ ನೆಲೆ ನಿಂತು ಸ್ಥಳೀಯರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿ ಹೊಸ ಜನಾಂಗವೊಂದರ ಉದಯಕ್ಕೆ ಕಾರಣರಾದರು. ಆ ಕಾಲದಲ್ಲಿ ಊಳಿಗಮಾನ್ಯ ವ್ಯವಸ್ಥೆ ಮತ್ತು ಜಾತಿ ಪದ್ದತಿ ಬಲವಾಗಿದ್ದ ದಿನಗಳಲ್ಲಿ ಕರಾವಳಿಗೆ ಬಂದ ಅರಬರು ಬಹುತೇಕ ಕೆಳವರ್ಗದ ಜನರನ್ನು ಇಸ್ಲಾಂ ಧರ್ಮದತ್ತ ಆಕರ್ಷಿಸಿದ್ದು, ಇದಕ್ಕೆ ಮುಖ್ಯ ಕಾರಣ ಅರಬರ ಔದರ್ಯ, ಪ್ರಾಮಾಣಿಕತೆ ಮತ್ತು ಶಿಸ್ತು ಬದ್ದ ಜೀವನ ಶೈಲಿ ಈ ರೀತಿ ಅರಬರ ಸಂಪರ್ಕದಿಂದಾಗಿಯೇ ದಕ್ಷಿಣದ ಕರಾವಳಿಯಲ್ಲಿ ಹೊಸಜನಾಂಗಗಳು ಜನ್ಮ ತಾಳದವು ವೆಂದು ಇತಿಹಾಸಕಾರ ತಾರಾಚಂದ್ ತಿಳಿಸಿದ್ದಾರೆ. 19

13ನೇ ಶತಮಾನದಲ್ಲಿ ಬಂದ ಮಾರ್ಕೋಪೋಲೋ ಮಂಗಳೂರಿನಲ್ಲಿರುವ ಮುಸ್ಲಿಂ ವರ್ತಕರ ಬಗ್ಗೆ ಉಲ್ಲೇಖಿಸಿದ್ದು ಈ ಜನರು ತಮ್ಮದೇ ಆದ ಭಾಷೆಯನ್ನು ಮಾತನಾಡುತ್ತಾರೆ ಎಂದು ದಾಖಲಿಸಿದ್ದಾನೆ. 20

ವಿದೇಶಿ ಪ್ರವಾಸಿ ಇಬನ್‌ಬತೂತ ಮಂಗಳೂರಿನಲ್ಲಿ ಮುಸ್ಲಿಂ ವರ್ತಕರು ದೊಡ್ಡ ಸಂಖ್ಯೆಯಲ್ಲಿ ಇದ್ದಾರೆಂದು ತಿಳಿಸಿದ್ದಾನೆ. ಕ್ರಿ.ಶ. 1623 ರಲ್ಲಿ ಮಂಗಳೂರಿಗೆ ಆಗಮಿಸಿದ ವಿದೇಶಿ ಪ್ರವಾಸಿಗ ಡೆಲ್ಲಾವೆಲ್ಲ ಮಂಗಳೂರಿನ ಮೂಸಾ ಬ್ಯಾರಿ ಬಗ್ಗೆ ಪ್ರಸ್ತಾಪಿಸಿರುವುದು ಬ್ಯಾರಿ ಭಾಷೆ ಸ್ವತಂತ್ರ ಭಾಷೆಯಾಗಿದೆಂಬುದನ್ನು ಸೂಚಿಸುತ್ತದೆ.21

ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ನೆಲೆಸಿರುವ ಬ್ಯಾರಿ ಜನಾಂಗದವರ ಬ್ಯಾರಿ ಭಾಷೆಯ ಕುರಿತಾಗಿ ವೈವಿಧ್ಯದ ಹಿನ್ನಲೆಯಲ್ಲಿಯೇ ಡಾ. ಅಮೃತ ಸೋಮೇಶ್ವರರವರು ಮೋಯ ಭಾಷೆಯಂತೆಯೇ ಬ್ಯಾರಿ ಭಾಷೆ ಕೂಡಾ ವ್ಯವಹಾರಕ್ಕಾಗಿ ಬಂದ ಹೆಸರು ಇದು ಮಲೆಯಾಳದ ಉಪ ಭಾಷೆಯಲ್ಲ ಇದು ಸ್ವತಂತ್ರವಾದ ಭಾಷೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಮುಸ್ಲಿಂ ಆಡು ನುಡಿಗಳಗಿಂತ ಉಳ್ಳಾಲ ಮುಂತಾದ ಸ್ಥಳಗಳಲ್ಲಿ ಭಾಷೆ ಕುಂಬಳೆ ಮತ್ತು ಕಾಸರಗೋಡು ಬ್ಯಾರಿ ಆಡು ನುಡಿಗಳಗಿಂತ ಸ್ವರೂಪ ಭೇದವುಳ್ಳಾದ್ದಾಗಿದೆ. ಮಂಗಳೂರು ಉಳ್ಳಾಲ, ಸುರತ್ಕಲ್ ನ ಪ್ರಾದೇಶಿಕ ಆಡು ನುಡಿಯನ್ನು ಮಾತ್ರ ಬ್ಯಾರಿ ಭಾಷೆಯೆಂದು ಕರೆದಿದ್ದಾರೆ. ಉಳಿದ ಬಾಗದ ಆಡು ನುಡಿಗಳು ನಿಸ್ಸಂದೇಹವಾಗಿ ಮಲೆಯಾಳದ ಉಪ ಭಾಷೆಗಳೆಂದೇ ತಿಳಿಯಬೇಕಾಗುತ್ತದೆ ಎನ್ನುತ್ತಾರೆ.22

ಹಿರಿಯ ಭಾಷಾ ತಜ್ಞರಾದ ಡಾ. ಯು.ಪಿ. ಉಪಾಧ್ಯಾಯರವರು ಬ್ಯಾರಿ ಒಂದು ಸ್ವತಂತ್ರ ಭಾಷೆ ಬ್ಯಾರಿ ಭಾಷೆಯಲ್ಲಿ ಮಲೆಯಾಳ ಭಾಷೆಯ ಲಕ್ಷಣಗಳೂ ಹಲವಾರುವಿರುವುದರಿಂದ ಮಲೆಯಾಳದ ಉಪ ಭಾಷೆಯೆಂಬುದಕ್ಕೆ ಮತ್ತು ತುಳು ಭಾಷೆಯ ಅಂಶಗಳು ಇರುವುದರಿಂದ ತುಳುಭಾಷೆಯ ಉಪಭಾಷೆಯೇ ಎನ್ನುವುದರ ಕುರಿತಾಗಿ ಈ ಎರಡು ಭಾಷೆಗಳಿಗಿಂತಲು ಭಿನ್ನವಾಗಿದ್ದು ಎರಡು ಭಾಷೆಗಳ ಕೆಲವು ಅಂಶಗಳನ್ನು ಸ್ವೀಕರಿಸಿ ಅಭಿವೃದ್ಧಿ ಹೊಂದಿದ ಒಂದು ಸ್ವತಂತ್ರ ಭಾಷೆಯೆಂದು ತಿಳಿಸಿದ್ದಾರೆ. 23

ಭಾಷೆ ಜನರ ಸಂಪರ್ಕದ ಮುಖ್ಯ ಮಾಧ್ಯಮ ಹಾಗೂ ಸಾಧನವಾಗಿದೆ. ಸಂಬಂಧದ ಕೊಂಡಿಯಾಗಿದೆ. ಭಾಷೆಯ ಮುಖಾಂತರ ಪರಸ್ಪರ ಭಾವೈಕ್ಯ ಮತ್ತು ನಿರಂತರವಾದ ಜೀವನವನ್ನು ಸಾಗಿಸಲು ಸಾಧ್ಯವಿದೆ ಹಾಗೂ ವಿವಿಧತೆಯಲ್ಲಿ ಏಕತೆಯೆಂಬ ಸಂದೇಶವನ್ನು ಸಾರಿದ ಈ ಮಣ್ಣಿನಲ್ಲಿ ತುಳುನಾಡು ಭಾರತದ ವೈವಿಧ್ಯತೆಯ ಇನ್ನೊಂದು ಮುಖವಾಗಿ ಕಾಣಬಹುದಾಗಿದೆ. ಏಕೆಂದರೆ ಈ ತುಳುನಾಡಿನಲ್ಲಿ ಜಾತಿಗೊಂದು, ಜನಾಂಗಕ್ಕೊಂದು ಆಚಾರ ವಿಚಾರ ಸಂಸ್ಕೃತಿ ಭಾಷೆಗಳಿವೆ.

ಈ ಎಲ್ಲ ಭಾಷೆಗಳಲ್ಲಿ ತುಳುನಾಡ ಕರಾವಳಿಯ ಬ್ಯಾರಿ ಜನಾಂಗದವರ ನಕ್ಕ್-ನಿಕ್ಕ್ ಭಾಷೆಯು ಅತ್ಯಂತ ಪ್ರಸಿದ್ಧಿ ಮತ್ತು ಖ್ಯಾತಿಯನ್ನು ಪಡೆದಿದೆ. ಈ ಭಾಷೆಯನ್ನು ನಕ್ಕ್-ನಿಕ್ಕ್ ಭಾಷೆಯೆಂದೇ ಕರೆಯಲಾಗಿದೆ.24

ಬ್ಯಾರಿ ಭಾಷೆಗೆ 1200 ವರ್ಷಗಳ ಇತಿಹಾಸ ಮಾತ್ರವಲ್ಲದೆ 3 ಸಾವಿರಕ್ಕೂ ಅಧಿಕವಾದ ಇತಿಹಾಸವಿದೆಯೆಂದು ಖ್ಯಾತ ಇತಿಹಾಸಕಾರ ಕೆ.ಎಂ. ಪಣಿಕ್ಕರ್ ತಿಳಿಸಿರುವಂತೆ ಅರೇಬಿಯಾವು ಭಾರತದ ಪಶ್ಚಿಮ ಕರಾವಳಿಯೊಂದಿಗೆ 3 ಸಾವಿರ ವರ್ಷಗಳಿಗೂ ಹಿಂದೆಯೇ ಸಾಗರ ಸಂಪರ್ಕವು ವಾಣಿಜ್ಯ ವ್ಯವಹಾರದೊಂದಿಗೆ ನಡೆಯುತ್ತಿತ್ತು ಎಂದು ಅಭಿಪ್ರಾಯ ಪಡುತ್ತಾರೆ. ಈ ನೆಲೆಯಲ್ಲಿ ಹೇಳುವುದಾದರೆ ಭಾರತದ ಪಶ್ಚಿಮ ಕರಾವಳಿಯ ಇಂದಿನ ದಕ್ಷಿಣ ಕನ್ನಡ ಜಿಲ್ಲೆ ಇಸ್ಲಾಂ ಧರ್ಮ ಪ್ರಚಾರವಾಗುವುದಕ್ಕೆ ಮೊದಲೇ ಇಲ್ಲಿಯ ಜನ ಬ್ಯಾರಿ ಭಾಷೆಯನ್ನು ಬಳಸುತ್ತಿದ್ದಾರೆಂದು ಉಲ್ಲೇಖಿಸಿರುವುದನ್ನು ಗಮನಿಸಬಹುದು.25

ಉದ್ಯೋಗ ನಿಮಿತ್ತ, ಉನ್ನತ, ವ್ಯಾಸಂಗಕ್ಕಾಗಿ ಗಲ್ಫ್ ಮತ್ತು ಇತರ ವಿದೇಶಗಳಿಗೆ ತೆರಳಿದ ಬ್ಯಾರಿಗಳು ಅಲ್ಲಿನ ಭಾಷೆಯ ಜೊತೆಗೆ ಬ್ಯಾರಿ ಭಾಷೆಯನ್ನು ಚೆನ್ನಾಗಿ ಮಾತಾಡುತ್ತಾರೆ. 1956 ರಲ್ಲಿ ಕರ್ನಾಟಕ ರಾಜ್ಯ ಅಸ್ತಿತ್ವ ಹೊಂದುವವರೆಗೆ ಕಾಸರಗೋಡು ಜಿಲ್ಲೆ ತುಳುನಾಡಿಗೆ ಒಳಪಟ್ಟಿತ್ತು. ಮತ್ತು ಈ ಪ್ರದೇಶದ ಮುಸ್ಲಿಂಮರಲ್ಲಿ ಅನೇಕ ಮಂದಿ ಬ್ಯಾರಿಗಳಾಗಿದ್ದರು. ಕಾಸರಗೋಡು, ಉಪ್ಪಳ, ಮಂಜೇಶ್ವರ ಕುಂಬಳೆ ಮೊದಲಾದ ಭಾಗಗಳಲ್ಲಿ ಬ್ಯಾರಿ ಭಾಷೆ ಮಾತಾಡುವ ಜನರನ್ನು ಇಂದಿಗೂ ಕಾಣಬಹುದಾಗಿದೆ. ಆದರೆ ಅವರು ಆಡುವ ಈ ಭಾಷೆಯಲ್ಲಿ ಸಾಕಷ್ಟು ವೈವಿಧ್ಯತೆಗಳು ಇರುವುದನ್ನು ಕೂಡ ಗಮನಿಸಬಹುದು.

ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ನಗರಗಳು, ಪಟ್ಟಣಗಳಲ್ಲಿ ಪುತ್ತೂರು, ವಿಟ್ಲ, ಸುಳ್ಯ, ಪಜೀರ್, ಮಂಜನಾಡಿ, ಕೊಣಾಜೆ, ಕಿನ್ಯ, ಪಟ್ಟೋರಿ, ನರಿಂಗಾನ, ಕೈರಂಗಳ, ಇರಾ, ಪತೂರು, ಬಾಕ್ರಬೈಲ್, ಸಾಲೆತ್ತೂರು, ಬೋಳಂತೂರು, ಸೂರಿಬೈಲು ಮೊದಲಾದ ಪ್ರದೇಶಗಳು ಕೇರಳ ರಾಜ್ಯದ ಗಡಿಭಾಗಕ್ಕೆ ಹೊಂದಿದ್ದು ಈ ಪ್ರದೇಶದಲ್ಲಿ ನೆಲೆಸಿರುವ ಬ್ಯಾರಿಗಳು ಆಡುವ ಬ್ಯಾರಿ ಭಾಷೆಯಲ್ಲಿ ಪ್ರಭಾವ ಜಾಸ್ತಿಯಿದ್ದು ವ್ಯಾಕರಣ ಶೈಲಿಯೂ ಮಲಯಾಳಂ ಭಾಷೆಯನ್ನೇ ಹೋಲುತ್ತದೆ. ಆದರೆ ಬ್ಯಾರಿಗಳು ತಮ್ಮ ರಾಜಧಾನಿಯನ್ನು 'ಮೈಕಾಲ' ಯೆಂದು ಮಲಯಾಲಂ ಭಾಷೆಯಲ್ಲಿ 'ಮಜ್ಜಳಾವರಂ' ವೆನ್ನುತ್ತಾರೆ. ಆದರೆ ಈ ಎಲ್ಲಾ ಗಡಿನಾಡ ಭಾಗದ ಜನರು ಮೈಕಾಲವೆಂದು ಹೇಳುವುದರಿಂದ ಇವರನ್ನು ಬ್ಯಾರಿಗಳೆಂದು ಪರಿಗಣಿಸುವುದರಲ್ಲಿ ಸಂಶಯವೇ ಇಲ್ಲ.26

'ಮಲಾಮೆ' ಭಾಷೆಯಲ್ಲಿ ಮಲೆಯಾಲಂ ಶಬ್ದಗಳು ಹೆಚ್ಚು ಇರುವುದರಿಂದ ಆ ಭಾಷೆಯನ್ನು ಮಲಾಮೆ ಎಂದು ಕರೆಯುತ್ತಾರೆ. ಶುದ್ಧ ಬ್ಯಾರಿ ಭಾಷೆಯಲ್ಲಿ ಅದ್‌ಲ್, ಇದ್‌ಲ್ ಎಂಬುವುದಕ್ಕೆ ಮಲಾಮೆ ಮಾತಾಡುವ ಬ್ಯಾರಿಗಳು ಅದ್‌ಲಿ, ಇದ್‌ಲಿ ಎನ್ನುತ್ತಾರೆ. ನಜ(ಇಜ), ಬರು(ಬರಿ), ಇಕ್ಕಾಲೆ(ಇರಿಕ್ಕಲ), ಇಲ್ಲಾಂತ್(ಇಲ್ಲಾಞ), ಕೋರೋಡಿ(ಕೋರ್ಚೆ), ಇಪ್ಪ(ಇಪ್ಪೊ), ಮಕ್ಕ(ಮಲ್ಲರ್), ಕಾಕ(ಇಚ್ಚ), ಬಂಡೆ(ಬರ್ನೆ), ಪೋಂಡೇ(ಪೋನ್ನೆ) ಇತ್ಯಾದಿ ಪದಗಳ ಮಾತಿನ ಕೊನೆಯಲ್ಲಿ ಲಿ.ರಿ.ನಿ., ಈ ಪದಗಳು ಬಳಕೆಯಲ್ಲಿರುವುದು ಕಾಣಬಹುದಾಗಿದೆ. ಬ್ಯಾರಿ ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ತುಂಬಾ ವ್ಯತ್ಯಾಸವಿದೆ ಎನ್ನುವುದಕ್ಕೆ ಮಂಗಳೂರು, ಉಳ್ಳಾಲ, ಜೋಕಟ್ಟೆ, ಕೃಷ್ಣಾಪುರ, ಸುರತ್ಕಲ್, ಕಟ್ಪಾಡಿ ಮುಂತಾದ ಪ್ರದೇಶದ ಬ್ಯಾರಿ ಜನತೆ ಆಡುವ ಭಾಷೆಯಲ್ಲಿ ಮಹತ್ತರವಾದ ವ್ಯತ್ಯಾಸವನ್ನು ಗಮನಿಸಬಹುದು ಎಂದೋ, ಎಂದೆ, ಎನ್ನಿ ಈ ಪದಗಳ ವ್ಯತ್ಯಾಸವನ್ನು ಕಾಣಬಹುದಾಗಿದೆ. ಕಿವಿಗೆ(ಕಾದ್), ಕೂಗುವುದಕ್ಕೆ(ಬುಲ್ಬುದಂಡ,ಕೇಲಂಡ), ಮನೆಗೆ, ಅವ(ಅಗ), ಕೆಲಸಕ್ಕೆ (ಸೊರ,ಪನಿ) ಬೆಳಗ್ಗೆ (ಸುಬೈ,ಕಾಲ್‌ತೇ) ಎಂಬ ಶಬ್ದಗಳನ್ನು ಉಪಯೋಗಿಸುತ್ತಾರೆ.27

ಬ್ಯಾರಿ ಭಾಷೆಗೆ ಹಳೆಗನ್ನಡವು ಮೂಲವಾಗಿದೆಯೆಂಬುದು ತಿಳಿಯಬಹುದು. ಹಳೆಗನ್ನಡದ ಮದ್‌ಲ್, ಸಪುರ, ಪುಲಿ, ತೋರ, ಕಡ, ರಾಮ, ಮುಂತಾದ ಪದಗಳು ಬ್ಯಾರಿ ಭಾಷೆಯಲ್ಲಿ ಕಾಣಬಹುದು ಇಲ್ಲಿ ಗಮನಿಸಬಹುದಾದ ಅಂಶವೇನೆಂದರೆ ಹಳೆ ಕನ್ನಡದ 'ಹ' ಅಕ್ಷರ ಬಳಕೆಯ ಪದಗಳು ಬ್ಯಾರಿ ಭಾಷೆಯಲ್ಲಿ "ಪ" ವಾಗಿ ಬಳಸಲಾಗುತ್ತದೆ. ಉದಾ:- ಹಕ್ಕಿ(ಪಕ್ಕಿ), ಹಗೆ(ಪಗೆ), ಹಿಡಿ(ಪಿಡಿ), ಹೊಗೆ(ಪೊಗೆ), ಹುಳಿ (ಪುಲಿ), ಹುಲಿ(ಪಿಲಿ), ಹುಳು(ಪುಳು) ಹಳತು(ಪಲೆದ್), ಹಲಗೆ(ಪಲಗೆ), ಹಾರು(ಪಾರ್) ಇತ್ಯಾದಿ ಪದಗಳ ಬಳಕೆಗಳ ಹೋಲಿಕೆಯನ್ನು ಕಾಣಬಹುದಾಗಿದೆ. 28

ಇಂಗ್ಲೀಷ್‌ನ ಕೆಲವು ಶಬ್ದಗಳು ಬ್ಯಾರಿ ಭಾಷೆಗೆ ರೂಪಾಂತರಗೊಂಡಿದೆ. ಮುಖ್ಯವಾದ ಪದಗಳು ಉದಾಹರಣೆಗೆ ಕಾಂಟ್ರ್ಯಾಕ್ಟ್(ಕಂತ್ರಾಟ್), ಸ್ಕೂಲ್(ಇಸ್ಕೂಲ್), ಡಾಕ್ಟರ್(ಡಾಕ್ಟರ್), ಮಿಡ್‌ವೈಫ್ (ಮೇಡ್‌ಬೈ), ಮಾಸ್ಟರ್(ಮಾಸ್ಟ), ಬುಕ್(ಬೂಕ್), ಸಿಕ್ನೆಸ್(ಸೀಕ್), ಬೆಂಚ್(ಬೆಂಚೆ), ಮೆಶಿನ್(ಮಿಸನ್), ಟ್ಯಾಂಕ್(ಟಾಂಕಿ). ಅರಬೀ ಭಾಷೆಯ ಕಾನೂನು,ಇಸ್ರಾಫ್(ಇಷಾರತ್,ಎಸರ್ತ್), ಕಸುಬು(ಕಸರತ್), ಉಮ್ಮ, ಅಬ್ಬ, ಅಖೇರಿ, ಬಶೀಲ್, ಖುಶಿ. ಉರ್ದು ಭಾಷೆಯ ಬಚಾವ್, ದರ್ಬಾರ್, ಬೇಜಾರ್, ಬರಾಬರಿ, ಖಾಲಿ, ದರ್ದ್, ಮಾಫ್ ಪದಗಳು ಬ್ಯಾರಿ ಭಾಷೆಯಲ್ಲಿ ಕಂಡು ಬರುತ್ತದೆ. ಈ ಎಲ್ಲಾ ಭಾಷೆಗಳ ಮಧ್ಯೆ ಬ್ಯಾರಿ ಭಾಷೆಯ ಶಬ್ದಗಳ ಪದಗಳು ಹೊಂದಾಣಿಕೆಯಾಗುತ್ತಿರುವುದರಿಂದ ಇತಿಹಾಸಕಾರರ ಅಭಿಪ್ರಾಯ.

ಭಾಷಾ ತಜ್ಞರ ಅಧ್ಯಯನಗಳ ಆಧಾರದಲ್ಲಿ ಹೇಳುವುದಾದರೆ ದಕ್ಷಿಣ ಭಾರತದ ದ್ರಾವಿಡ ಭಾಷೆ ಮತ್ತು ಅದರ ಉಪ ಭಾಷೆಗಳೊಂದಿಗೆ ಬ್ಯಾರಿ ಭಾಷೆಯ ಪದಗಳ ಬಳಕೆ ಹಾಗೂ ಇತರ ಭಾಷೆಗಳಾದ ಅರಬೀ ಉರ್ದು ಇಂಗ್ಲೀಷ್ ಭಾಷೆಗಳ ಪದಗಳೊಂದಿಗೆ ಬ್ಯಾರಿ ಭಾಷೆಯ ಪದಗಳ ಹೋಲಿಕೆಯಿದೆಯೆಂದರೆ ಬ್ಯಾರಿ ಸಮುದಾಯ ದಕ್ಷಿಣ ಭಾರತದ ಕರಾವ್ಳ ತುಳುನಾಡಿನಲ್ಲಿ ತನ್ನ ದೀರ್ಘವಾದ ಇತಿಹಾಸವನ್ನು ಹೊಂದಿದೆ ಎನ್ನಬಹುದು.29

ಬ್ಯಾರಿಯೆನ್ನುವ ಪದದ ಮೂಲದ ಕುರಿತಾಗಿ ಈ ಪದ ಕೇವಲ ಕರಾವಳಿ ಕರ್ನಾಟಕದ ತುಳುನಾಡಲ್ಲಿ ಮಾತ್ರ ಕಂಡು ಬಂದ ಕಾರಣ ಮತ್ತು ಈ ಜನ ವ್ಯಾಪಾರವನ್ನೇ ನೆಚ್ಚಿಕೊಂಡು ಈ ಪ್ರದೇಶದಲ್ಲಿ ನೆಲೆಸಿರುವ ಕಾರಣ ತುಳುವಿನ 'ಬ್ಯಾರ' ಯೆನ್ನುವ ಪದದಿಂದ ಬಂದಿದೆ. ಇದು ತುಳು ಮೂಲದ್ದೇ ಆಗಿದೆಯೆಂದು ಹಾಗೂ ಈ ಭಾಷೆಯನ್ನು ಆಡುವ ಜನರ ಮೂಲ ತುಳುನಾಡೇ ಆಗಿದೆ ಎಂದು ಲೇಖಕ ಪೇರೂರು ಜಾರೂರವರ ಅಭಿಪ್ರಾಯ. ಇದಕ್ಕೆ ಪೂರಕವಾಗಿ ಇತಿಹಾಸಕಾರರಾದ ಬಿ.ಎ. ಸಾಲೆತ್ತೂರು ಅವರು ತುಳು ಮಾಪಿಳ್ಳೆಗಳು (ಬ್ಯಾರಿಗಳು) ಅರಬ್ಬೀ ತಂದೆಗೆ ಮತ್ತು ತುಳು ತಾಯಿಗೆ ಜನ್ಮವನ್ನು ಪಡೆದ ಮಕ್ಕಳು ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ವಾದ ಬ್ಯಾರಿ ಜನಾಂಗದ ಅಸ್ತಿತ್ವದ ಕಾಲಘಟ್ಟವನ್ನು ಸೂಚಿಸುತ್ತದೆ. ಮುಖ್ಯವಾಗಿ ಈ ಬ್ಯಾರಿಗಳು ಧಾರ್ಮಿಕವಾಗಿ ಇಸ್ಲಾಂ ಧರ್ಮವನ್ನು ಅನುಸರಿಸಿದರೂ ಇವರ ಆಚಾರ ವಿಚಾರಗಳಲ್ಲಿ ತುಳು ಸಂಸ್ಕೃತಿಗಳನ್ನು ಕಾಣಬಹುದೆಂದು ನಾವು ತಿಳಿಯಬಹುದು.30

ಕರ್ನಾಟಕಾ ಕರಾವಳಿಯ ತುಳುನಾಡಿನಲ್ಲಿ ನೆಲೆಸಿರುವ ಬ್ಯಾರಿ ಸಮುದಾಯಕ್ಕೆ ತನ್ನದೇ ಆದ ಒಂದು ದೀರ್ಘ ಇತಿಹಾಸವಿದ್ದು ಸಂಶೋಧಕರ ಪ್ರಕಾರ ಈ ಸಮುದಾಯಕ್ಕೆ ಮತ್ತು ಬ್ಯಾರಿ ಭಾಷೆಗೆ ಸಾವಿರ ವರ್ಷಗಳ ಇತಿಹಾಸವಿದ್ದು ಇಲ್ಲಿ ನೆಲೆಸಿರುವ 10 ಲಕ್ಷದಷ್ಟು ಜನಗಳ ಮನೆ ಭಾಷೆಯಾಗಿರುವ ಬ್ಯಾರಿಯು ಕನ್ನಡ ಪದ(ವ್ಯಾಪಾರ)ತುಳುವಿನ(ಬ್ಯಾರ) ವ್ಯಾಪಾರಿ (ಬ್ಯಾರಿ) ಆಗಿದೆಯೆಂದು ವ್ಯಾಪಾರಕ್ಕೂ ಈ ಬ್ಯಾರಿಗಳಿಗೂ ನಿಕಟ ಸಂಬಂಧವಿದೆ ಇದು ಮುಖ್ಯವಾಗಿ 7ನೇ ಶತಮಾನದಲ್ಲಿ ಕರಾವಳಿಯ ಮುಸ್ಲಿಮರಿಗೆ ಅರಬರೊಂದಿಗೆ ವ್ಯಾಪಾರ ಸಮಬಂಧವಿತ್ತೆಂದು ಇತಿಹಾಸಕಾರರು ತಿಳಿಸುತ್ತಾರೆ. ಖ್ಯಾತ ಇತಿಹಾಸ ತಜ್ಞ ಥಾಮಸ್ ಅರ್ನಾಲ್ಡ್ ರವರು ದಕ್ಷಿಣ ಭಾರತಕ್ಕೆ ಇಸ್ಲಾಮಿನ ಆಗಮನವೂ ೮ನೇ ಶತಮಾನಕ್ಕಿಂತ ಮೊದಲೇ ಇತ್ತೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಚರಿತ್ರೆಕಾರ ಇಲ್ಯಟ್‌ರವರು ತಮ್ಮ ಗ್ರಂಥ 'ಭಾರತ ಚರಿತ್ರೆ ಭಾಗ-1' ರಲ್ಲಿ ಪ್ರಥಮ ಮುಸ್ಲಿಂ ನೌಕೆ ಬಂದಿರುವುದು ಕ್ರಿ.ಶ. 630 ರಲ್ಲಿ ಎಂದಿದ್ದಾರೆ. ಚರಿತ್ರೆಕಾರ ರೋಲೆಂಟ್ಸ್ ರವರ ಪ್ರಕಾರ ಅರಬ್ ಮುಸ್ಲಿಮರು ಮಲಬಾರ್‌ನಲ್ಲಿ ಕಾಣಿಸಿಕೊಂಡಿದ್ದು ೭ನೇ ಶತಮಾನದ ಕೊನೆಯ ಭಾಗದಲ್ಲಿ ಎಂದಿದ್ದಾರೆ.

ಸ್ಟರಕ್‌ರವರು ತಮ್ಮ 'ಸೌತ್ ಕೆನರಾ ಮ್ಯಾನ್‌ವೆಲ್' ನಲ್ಲಿ ತಿಳಿಸಿರುವಂತೆ ಕ್ರಿ.ಶ. 7ನೇ ಶತಮಾನದಿಂದ ಮುಂಚೆ ಅರಬಿ ವ್ಯಾಪಾರಿಗಳು ಭಾರತದ ಪಶ್ಚಿಮ ಕರಾವಳಿಯಲ್ಲಿರುವ ವಿವಿಧ ಬಂದರುಗಳಲ್ಲಿ ದೊಡ್ಡ ಸಂಖ್ಯೆಯಲ್ಲಿ ಇಳಿದು ನಂತರ ಸ್ಥಳೀಯ ಮಹಿಳೆಯರನ್ನು ಮದುವೆ ಮಾಡಿಕೊಂಡಿದ್ದರೆಂದು ತಿಳಿಸಿದ್ದು ಬ್ಯಾರಿ ಸಮುದಾಯದ ಮೂಲದ ಕುರಿತಾಗಿರುವ ಮುಖ್ಯ ಆಧಾರವಾಗಿದೆ. ಭಾರತದ ಖ್ಯಾತ ಇತಿಹಾಸಕಾರ ಕೆ.ಎಂ. ಪಣಿಕ್ಕರ್ ರವರ ಪ್ರಕಾರ ಅರೇಬಿಯಾವು ಭಾರತದ ಪಶ್ಚಿಮ ಕರಾವಳಿಯೊಂದಿಗೆ ಸುಮಾರು 2000 ವರ್ಷಗಳಿಗೂ ಹಿಂದಯೇ ಸಾಗರ ಸಂಪರ್ಕ ಹೊಂದಿದ್ದಾರೆಂದು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ.31

10ನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ ಅರಬ್ ಪ್ರವಾಸಿಗ ಅಲ್ ಬರೂನಿ ಮತ್ತು 13ನೇ ಶತಮಾನದಲ್ಲಿ ಅಬುಲ್‌ಐದಾ, ಮಹಮ್ಮದ್‌ಇಬ್ನ್ ಅಬ್ದುಲ್ಲಾ ಮುಂತಾದ ಪ್ರವಾಸಿಗರು ತುಳುನಾಡಿನ ಸಿಂಥಬೂರ್(ಕುಂದಾಪುರ), ಫಾಕನೂರು(ಬಾರ್ಕೂರು/ಬಸ್ರೂರು), ಮಂಜಲೂರು(ಮಂಗಳೂರು) ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ವರ್ಣಿಸಿದ್ದಾರೆ. ಆದರೆ ಇವರು ಉಲ್ಲೇಖಿಸಿದ ಉಲ್ಲೇಖಗಳಲ್ಲಿ ಮುಸ್ಲಿಮರು ವ್ಯಾಪಾರಿಗಳಾಗಿದ್ದಾರೆಂದು ತಿಳಿಯಲಾಗಿದೆ.32

15ನೇ ಶತಮಾನದಲ್ಲಿ ಇಟಲಿಯ ಪ್ರವಾಸಿಗ ಪೀಟರ್ ಡೆಲ್ಲಾವೆಲ್ಲ ತುಳುನಾಡಿನ ಮುಸ್ಲಿಮರ ಕುರಿತಾಗಿ ವ್ಯಾಪಾರ ಮತ್ತು ಸೇನಾಧಿಪತಿಗಳ ಬಗ್ಗೆ ತಿಳಿಸುತ್ತಾ ಮೂಸಾ ಬ್ಯಾರಿಯ ಬಗ್ಗೆ ತಿಳಿಸಿದ್ದಾನೆ. ಹಾಗೂ 16ನೇ ಶತಮಾನದ ಪೋರ್ಚುಗೀಸ್ ಪ್ರವಾಸಿಗನಾದ ದುರಾಂತೆ ಬಾರ್ಬೋಸ್ ತನ್ನ ದಿನಚರಿಯಲ್ಲಿ ತುಳುನಾಡಿನ ಮುಸ್ಲಿಮರ ಬಗ್ಗೆ ವರದಿ ಮಾಡಿದ್ದಾನೆ. ಕ್ರಿ.ಶ. 1ನೇ ಶತಮಾನದಲ್ಲಿ ಭಾರತಕ್ಕೆ ಯಾತ್ರೆ ಮಾಡಿದ ಇತಿಹಾಸಕಾರ ಪ್ಲಿನಿ ಪ್ರಕಾರ ಅರಬರು ಅಂದು ಮಲಬಾರ್ ಕರಾವಳಿಯಲ್ಲಿ ಹಾಗೂ ಲಂಕೆಯಲ್ಲಿ ನೆಲೆಸಿದ್ದರು ಎಂದು ಉಲ್ಲೆಖಿಸಿದ್ದಾನೆ. 33

ಬ್ಯಾರಿ ಸಮುದಾಯ ಜನ್ಮ ಪಡೆಯಲು ಕಾರಣ ಇಸ್ಲಾಂ ಧರ್ಮ ಪ್ರಚಾರಕರು ಈ ಕುರಿತಾದ ಹೇಳಿಕೆಯಲ್ಲಿ ಇಸ್ಲಾಂ ಅರೇಬಿಯಾದಲ್ಲಿ ಪುನಶ್ಚೇತನಗೊಂಡು 6ನೇ ಶತಮಾನದಲ್ಲಿ ಭಾರತಕ್ಕೂ ಪ್ರವೇಶಿಸುವ ಸಂದರ್ಭದಲ್ಲಿ ಕೇರಳದಲ್ಲಿ ಅರೇಕ್ಕಲ್ ರಾಜವಂಶದ ಆಳ್ವಿಕೆಯಿತ್ತು. ಹಾಗೂ ಭಾರತದಲ್ಲಿ ಈ ರಾಜವಂಶಸ್ಥರು ಇಸ್ಲಾಂ ಧರ್ಮ ಪ್ರಚಾರಕ್ಕೆ ಹೆಚ್ಚು ಸಹಾಯ ಮಾಡಿದರು. ಈ ಕುರಿತಾಗಿ ಕೇರಳ ಚರಿತ್ರೆಯ ಗ್ರಂಥವಾದ' ಕೇರಳೋತ್ಪತ್ತಿಯಲ್ಲಿ ತುಹ್ಪತುಲ್ ಮುಜಾಹಿದೀನ್ ವೆಂಬ ಅರಬೀ ಗ್ರಂಥ'ದಲ್ಲಿ ಉಲ್ಲೇಖವಿರುವುದನ್ನು ಕಾಣಬಹುದು.

ಈ ರಾಜವಂಶದ ಚಕ್ರವರ್ತಿ ಚೇರುಮಾನ್ ಪೆರುವಾಳ್ ಇಸ್ಲಾಂ ಧರ್ಮವನ್ನು ಸ್ವೀಕರಿಸಿ ಮಕ್ಕಾ ನಗರಕ್ಕೆ ಹೋಗಿದ್ದು ಮತ್ತು ಪ್ರವಾದಿ ಮಹಮ್ಮದ್(ಸ.ಅ)ರವರನ್ನು ಭೇಟಿಯಾದ ಕುರಿತು ಕೇರಳೋತ್ಪತ್ತಿಯಲ್ಲಿ ಉಲ್ಲೆಖವಿದೆ.34

ಮುಸ್ಲಿಂ ಮಿಷನರಿ ಸಂಘವು ಕೊಡಂಗಲ್ಲೂರಿನಿಂದ ಮಲಬಾರಿನಾದ್ಯಂತ ಧರ್ಮ ಪ್ರಚಾರ ಮಾಡಿದ್ದಲ್ಲದೇ ಹಲವಡೆಗಳಲ್ಲಿ ಮಸೀದಿಯನ್ನು ಸ್ಥಾಪಿಸಿದರು. ಮಲಬಾರಿನಿಂದ ತುಳುನಾಡಿಗೆ ಪ್ರವೇಶಿಸಿ ಬಕ್ಕರೂರು(ಬಾರ್ಕೂರು)ವರೆಗೆ ತಲುಪಿ ಕೆನರಾ ಕರಾವಳಿಯಲ್ಲಿ ಮಂಜಲೂರು(ಮಂಗಳೂರು) ಕನ್ಯಾರೋಡ್(ಕಾಸರಗೋಡು)ಗಳಲ್ಲಿ ಮಸೀದಿಗಳನ್ನು ಸ್ಥಾಪಿಸಿ ಆಯಾ ಮಸೀದಿಗಳಿಗೆ ಖಾಝಿಗಳನ್ನು ನೇಮಿಸಿದರೆಂಬುದನ್ನು ಲೋಗನ್‌ನ 'ಮಲಬಾರ್‌ಮ್ಯಾನುವೆಲ್'ನಲ್ಲಿ ವಿವರಿಸಲಾಗಿದೆ.ಹಾಗೂ ಇದರ ಕುರಿತಾದ ದೀರ್ಘ ವಿವರಣೆಗಳು ಗೋಪಲನ್ ನಾಯರ್ ರವರ 'ಮಲಾಬಾರಿನ ಮಾಪಿಳ್ಳೆ' ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ. ಈ ರೀತಿ ಧರ್ಮಭೋಧಕರಾಗಿ ಬಂದ ಅರಬ್ ವಿದ್ವಾಂಸರ ಪ್ರಭಾವದಿಂದ ಇಲ್ಲಿನ ಜನರು ಇಸ್ಲಾಂ ಧರ್ಮವನ್ನು ಸ್ವೀಕರಿಸಿ ಇಲ್ಲಿನ ಸಂಸ್ಕೃತಿಗಳು ಸಮ್ಮಿಲನಗೊಂಡು ಹೊಸ ಸಮುದಾಯ ಹಾಗೂ ಸಂಸ್ಕೃತಿಯೊಂದು ಉಗಮವಾಯಿತು. ಈ ಸಮುದಾಯವನ್ನೇ ಬ್ಯಾರಿಗಳೆಂದು ಗುರುತಿಸಲಾಗಿದೆ.35

ಬಹರಿ ಅಥವಾ ಬೆಹರಿ (ಸಮುದ್ರಯಾನಿ) ಎಂಬ ಪದದಿಂದ ಬ್ಯಾರಿ ಪದವು ಬಳಕೆಗೆ ಬಂದಿದೆಂದು ಅಭಿಪ್ರಾಯವಿದೆ. ಹಾಗೂ ಇತರ ಕುರಿತಾಗಿ ಅಧ್ಯಯನ ನಡೆಸಿದ ಪ್ರಮುಖ ಇತಿಹಾಸಕಾರರು, ಚಿಂತಕರು, ಲೇಖಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾ 'ಬ್ಯಾರ' ವೆಂಬ ತುಳುಪದದಿಂದ 'ಬ್ಯಾರಿ' ಪದ ಬಂದಿದೆ ಎನ್ನುತ್ತಾರೆ. ಆದರೆ ಬ್ಯಾರಿ ಪದವು ಅರೇಬಿಯಾದ 'ಬೆಹಾರಿ'ಯಿಂದ ಉದ್ಬವಿಸಿದ್ದರು ತುಳುವಿನ ಬ್ಯಾರ ಮತ್ತು ಕನ್ನಡದ ವ್ಯಾಪಾರಿ ಪದಗಳಿಂದ ಬಂದಿದೆಯೇ ಎನ್ನುವುದನ್ನು ನಿರಾಕರಿಸಲು ಸಾಧ್ಯವಿಲ್ಲ ಯಾಕೆಂದರೆ ಈ ಜನಾಂಗದ ಮೂಲ ಕಸಬನ್ನು ಕೇಂದ್ರೀಕರಿಸಿಕೊಂಡು ಹೇಳುವುದಾದರೆ ಬ್ಯಾರಿಗಳ ಮೂಲ ಕಸುಬು ವ್ಯಾಪಾರವೇ ಆಗಿತ್ತು.

ಬ್ಯಾರಿ ಭಾಷೆಯಲ್ಲಿ ಅಧಿಕವಾಗಿ ಅರಬಿ ಪದಗಳು ಸೇರಿರುವುದನ್ನು ಈಗಾಗಲೇ ಉದಾಹರಣೆ ಸಹಿತ ನೀಡಲಾಗಿದ್ದು ಇದಕ್ಕೆ ಪೂರಕವಾಗಿ ಪ್ರಥಮ ಸರ್ವೇ ದಾಖಲೆಯಾದ 'ಕೌಚ್‌ಮನ್ ಸರ್ವೇ' ಮತ್ತು ಸೆಟ್ಲ್ ಮೆಂಟ್ ದಾಖಲೆ (1904-1905) ಇವುಗಳಲ್ಲಿ ತುಳುನಾಡಿನ ಬ್ಯಾರಿಗಳ ಕುರಿತಾಗಿ ದಾಖಲಾಗಿದ್ದು ಈ ಎಲ್ಲ ದಾಖಲೆಗಳಲ್ಲಿ ಆರ್ಥಿಕವಾಗಿ ಅರಬೀ ಪದಗಳನ್ನು ಬಳಸಿದ್ದು ಗಮನಿಸಬಹುದು.36

ಬ್ಯಾರಿ ಭಾಷೆಯು ದಕ್ಷಿಣ ಭಾರತದ ಭಾಷೆಗಳ ಪ್ರಭಾವದಿಂದ ಜನಿಸಿದೆ ಎನ್ನುವುದಕ್ಕೆ ಇದು ದ್ರಾವಿಡ ಭಾಷೆಯ ಉಪ ಭಾಷೆಗಳಲ್ಲಿ ಒಂದು ಎನ್ನುವುದನ್ನು ಪ್ರೊ. ಬಿ. ಎಂ. ಇಚ್ಲಂಗೋಡು ನಡೆಸಿದ ಅಧ್ಯಯನವನ್ನು ಕೇಂದ್ರಿಕರಿಸಿ ಈ ಭಾಷೆಗೆ ನಿಖರವಾದ ಪ್ರತ್ಯೇಕ ಲಿಪಿ ಇಲ್ಲದಿರುವುದರಿಂದ ಈ ಭಾಷೆಗೆ ಸ್ಥಾನಮಾನ ದೊರೆಯದೇ ಹೋಯಿತು ಇದಕ್ಕೆ ಮುಖ್ಯ ಕಾರಣ ಈ ಬ್ಯಾರಿಗಳು ತಮ್ಮ ಬರಹದ ಕುರಿತು ಹೆಚ್ಚಿನ ಆಸಕ್ತಿ ವಹಿಸದೇ ಇರುವುದು. ಆದರೆ ಇಚ್ಲಂಗೋಡು ರವರು ನಡೆಸಿದ ಸಂಶೋಧನೆಯಿಂದ ಈ ಭಾಷೆಗೆ ಬಟ್ಟೆ ಲಿಪಿ (ಬಟ್ಟೆ ಬರಹ) ಬಳಸುತ್ತಿದ್ದರು. ಬಟ್ಟೆಯಲ್ಲಿ ಬರೆಯುವುದು ಎಂದರ್ಥ ಇದರ ಕುರಿತಾಗಿ ಬ್ಯಾರಿ ಭಾಷೆಯ ಮತ್ತು ಈ ಜನಾಂಗದ ಇತಿಹಾಸದ ಕುರಿತಾಗಿ ಪ್ರಥಮ ಲೇಖನವನ್ನು ಬರೆದ ಅಹ್ಮದ್ ನೂರಿಯವರು ಇದೇ ರೀತಿಯ ಅಭಿಪ್ರಾಯವನ್ನು ತ'ನ್ನ 'ಮೈಕಾಲ' ಕೃತಿಯಲ್ಲಿ ತಿಳಿಸುತ್ತಾರೆ.37

ಇತಿಹಾಸಕಾರ ಪಿ.ಎ.ಸೈಯ್ಯದ್ ಮಹಮ್ಮದ್‌ರವರು ತಿಳಿಸುವಂತೆ ಬಟ್ಟೆ ಬರಹದ ಅನೇಕ ಗ್ರಂಥಗಳು ಅರಕ್ಕಳ್ ಸುಲ್ತಾನ್ ಅಲಿರಾಜರ ಅರಮನೆಯಲ್ಲಿ ರಕ್ಷಿಸಲಾಗಿದ್ದು ಈ ಮೂಲಕ ಬ್ಯಾರಿ ಭಾಷೆಗೆ ಲಿಪಿಯಿತ್ತು. ಎನ್ನುವುದನ್ನು ದೃಢೀಕರಿಸಿದ್ದಾರೆ. ಆದರೆ ಇತ್ತೀಚೆಗೆ ಬ್ಯಾರಿಗಳು ತಮ್ಮ ಬಾಷೆಗೆ ಕನ್ನಡ ಲಿಪಿಯನ್ನು ಬಳಸುತ್ತಿರುವುದನ್ನು ಗಮನಿಸಬಹುದು ಹಾಗೂ ಧಾರ್ಮಿಕವಾಗಿ ಇತರ ಮುಸ್ಲಿಂಮರಿಗೂ, ಬ್ಯಾರಿಗಳಿಗೂ ಯಾವುದೇ ರೀತಿಯ ವ್ಯತ್ಯಾಸ ಕಂಡು ಬರುವುದಿಲ್ಲ. ಈ ನೆಲೆಯಲ್ಲಿ 'ಬ್ಯಾರಿ' ಎಂಬುವುದನ್ನು ಕೇವಲ ಭಾಷಾ ವಿಶೇಷತೆ ಮಾತ್ರವಾಗಿದ್ದು ಅದು ಜಾತಿ ಅಥವಾ ಉಪ ಜಾತಿ ಅಲ್ಲ, ಸಂಸ್ಕೃತಿಗಳ ಅರಿವು ಈ ಪದವನ್ನು ಹೆರಿನೊಂದಿಗೆ ಗೌರವದ ಸಂಕೇತವಾಗಿ ಬಳಸಲಾಗಿದ್ದು ಈ ಸಮುದಾಯದ ಮೂಲಕಕುರಿತಾಗಿ ಅಧ್ಯಯನ ನಡೆಸಲು ಸಹಕಾರಿಯಾಗಿದೆ.38

**ಪರಾಮರ್ಶನ ಗ್ರಂಥಗಳು :-**


1. ಬಿ.ಎ. ಮಹಮ್ಮದ್ ಹನೀಫ್, ಬ್ಯಾರಿ ಅದ್ಯಯನ-2008
2. ಹಂಝುಮಲಾರ್, ಬ್ಯಾರಿ ಅಧ್ಯಯನ 2008 ಪುಟಸಂಖ್ಯೆ..8
3. ಅದೇ
4. ಹಂಝುಮಲಾರ್,ಬ್ಯಾರಿ ಅಧ್ಯಯನ 2008 ಪುಟಸಂಖ್ಯೆ..9
5. ಅದೇ
6. ಹಂಝುಮಲಾರ್, ಮಂಗಳೂರು ದರ್ಶನ ಸಂಪುಟ –೨ ಪುಟಸಂಖ್ಯೆ..762
7. ಅದೇ
8. ಹಂಝುಮಲಾರ್, ಮಂಗಳೂರು ದರ್ಶನ ಸಂಪುಟ –೨ ಪುಟಸಂಖ್ಯೆ..762
9. ಪ್ರೊ. ಬಿ.ಎಂ. ಇಚ್ಲಂಗೋಡು, ವಾರ್ತಾಭಾರತಿ ದಿನಪತ್ರಿಕೆಯ ಲೇಖನ
10. ಅದೇ
11. ಅದೇ
12. ಡಾ. ಕೆ.ಎಂ. ಲೋಕೇಶ್, ಪೆರಿಮೆ, ಪುಟಸಂಖ್ಯೆ. 18
13. ಅಬ್ದುಲ್ ರಹೀಂಟೀಕೆ, ಮಂಗಳೂರು ದರ್ಶನ ಸಂಪುಟ –೨ ಪುಟಸಂಖ್ಯೆ..752
14. ಅದೇ
15. ಪ್ರೊ. ಬಿ.ಎಂ. ಇಚ್ಲಂಗೋಡು, ಮಂಗಳೂರು ದರ್ಶನ ಸಂಪುಟ ೧ ಪುಟಸಂಖ್ಯೆ. – 737
16. ಡಾ. ವಹಾಬ್ ದೊಡ್ಡಮನೆ, ತುಳುನಾಡ ಮುಸ್ಲಿಮರು, ಪುಟಸಂಖ್ಯೆ. 35
17. ಬಿ.ಎ. ಮೊಹಮ್ಮದ್ ಹನೀಫ್ ,ಬ್ಯಾರಿ ಆಂದೋಲನದ ಹೆಜ್ಜೆಗಳು, ಪುಟಸಂಖ್ಯೆ. – 21
18. ಡಾ.ಕೆ.ಎಂ.ಲೋಕೇಶ್, ಪೆರಿಮೆ, ಪುಟಸಂಖ್ಯೆ..19
19. ಪ್ರೊ. ಬಿ.ಎಂ. ಇಚ್ಲಂಗೋಡು, ಮಂಗಳೂರು ದರ್ಶನ, ಸಂಪುಟ ೧ ಪುಟಸಂಖ್ಯೆ. 235
20. ಡಾ. ಕೆ.ಜಿ. ವಸಂತ್ ಮಾದವ, ಪೆರಿಮೆ ಪುಟಸಂಖ್ಯೆ. –29
21. ಡಾ. ವಹಾಬ್ ದೊಡ್ಡಮನೆ ತುಳುನಾಡು ಮುಸ್ಲಿಮರು ಪುಟಸಂಖ್ಯೆ.34
22. ಡಾ. ಅಮೃತ ಸೋಮೇಶ್ವರ ಪೆರಿಮ ಪುಟಸಂಖ್ಯೆ – 2
23. ಡಾ. ಸುಶೀಲಾ ಉಪಾಧ್ಯಾಯ, ಪೆರಿಮೆ ಪುಟಸಂಖ್ಯೆ. –32
24. ಪ್ರೊ. ಫಮೀದ ಮನ್ಸೂರ್, ಪೆರಿಮೆ ಪುಟಸಂಖ್ಯೆ – 118

25. ಹಂಝು ಮಲಾರ್ ಮಂಗಳೂರು ದರ್ಶನ ಸಂಪುಟ ೨ - ಪುಟಸಂಖ್ಯೆ - 763

ಪ್ರೊ. ಬಿ.ಎಂ. ಇಚ್ಲಂಗೇಡು ಮಂಗಳೂರು ದರ್ಶನ ಸಂಪುಟ ೧ - ಪುಟಸಂಖ್ಯೆ. - 234

26. ಅದೇ

27. ಹಂಝು ಮಾಲಾರ್ - ಬ್ಯಾರಿ ಅಧ್ಯಯನ 2008 - ಪುಟಸಂಖ್ಯೆ - 12

28. ಪ್ರೊ. ಹುಲುಗಪ್ಪ ಹೆಚ್.ಆರ್, ಪೆರಿಮೆ, ಪುಟಸಂಖ್ಯೆ. -97

29. ಪ್ರೊ. ಬಿ.ಎಂ. ಇಚ್ಲಂಗೋಡು, ತುಳುನಾಡ ಬ್ಯಾರಿಗಳು ಪುಟಸಂಖ್ಯೆ-7

30. ಪ್ರೊ. ಬಿ.ಎಂ. ಇಚ್ಲಂಗೋಡು ತುಳುನಾಡ ಬ್ಯಾರಿಗಳು ಪುಟಸಂಖ್ಯೆ-8

31. ಡಾ. ವಹಾಬ್ ದೊಡ್ಡಮನೆ ತುಳುನಾಡು ಮುಸ್ಲಿಮರು ಪುಟಸಂಖ್ಯೆ.34

32. ಅದೇ

33. ಪ್ರೊ. ಬಿ.ಎಂ. ಇಚ್ಲಂಗೋಡು ತುಳುನಾಡ ಬ್ಯಾರಿಗಳು ಪುಟಸಂಖ್ಯೆ-10

34. ಅದೇ - ಪುಟಸಂಖ್ಯೆ-11

35. ಅದೇ

36. ಅದೇ

37. ಅದೇ

38. ಅದೇ

# ಅಧ್ಯಾಯ-4

## ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಸ್ಥಿತಿಗತಿಗಳು

ಭಾರತವು ಜಾತ್ಯಾತೀತ ರಾಷ್ಟ್ರವಾಗಿದ್ದು, ಪ್ರಪಂಚಕ್ಕೆ ಜಾತ್ಯಾತೀತ ತತ್ವವನ್ನು ಭೋಧಿಸಿದ ಮೊದಲ ರಾಷ್ಟ್ರ. ಏಕೆಂದರೆ ಈ ರಾಷ್ಟ್ರದಲ್ಲಿ ವಿವಿಧತೆಯಲ್ಲಿ ಏಕತೆಯನ್ನು ಕೇಂದ್ರಿಕರಿಸಿ ಈ ಮಾತನ್ನು ಹೇಳಲಾಗಿದೆ. ಭಾರತ ಜಾತ್ಯಾತೀತ ಸನಾತನ ರಾಷ್ಟ್ರ. ಈ ರಾಷ್ಟ್ರಕ್ಕೆ ಪ್ರಾಚೀನ ಕಾಲದಿಂದಲೂ ಹಲವು ಜನ ವಿದೇಶಿಗರು ಭೇಟಿ ನೀಡಿದ್ದು ವಿದೇಶಿಗರನ್ನು ಭಾರತ ಪ್ರಾಚೀನ ಕಾಲದಿಂದಲೇ ಆಕರ್ಷಿಸುತ್ತಿತ್ತು. ಈ ರಾಷ್ಟ್ರ ವಿದೇಶಿಗರ ನೆಚ್ಚಿನ ಪ್ರಾಲಾಪ ತಾಣವಾಗಿತ್ತು ಎನ್ನುವುದಕ್ಕೆ ಹಲವು ಜನ ವಿದೇಶಿ ಪ್ರವಾಸಿಗರ ಅಭಿಪ್ರಾಯವನ್ನು ನಾವು ಕಾಣಬಹುದಾಗಿದೆ. ಈ ಪ್ರಮುಖ ವಿದೇಶಿ ಪ್ರವಾಸಿಗರು ಗ್ರೀಕ್-ರೊಮ್, ಅರಬ್ ರಾಷ್ಟ್ರಗಳಿಂದ ಬಂದಿದ್ದು ಭಾರತದ ಕುರಿತಾಗಿ ಹಲವು ತಮ್ಮ ಅಭಿಪ್ರಾಯವನ್ನು ಅವರ ಪ್ರವಾಸ ಕಥನಗಳಲ್ಲಿ ಉಲ್ಲೇಖಿಸಿದ್ದಾರೆ. ಅರಬ್, ಪರ್ಶಿಯಾ, ಇಟಲಿ ಮೊದಲಾದ ವಿದೇಶಿ ರಾಷ್ಟ್ರಗಳ ಪ್ರವಾಸಿಗರು ಭಾರತದ ಕುರಿತಾಗಿ ಇಲ್ಲಿನ ಜನರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ವಾಣಿಜ್ಯ ವ್ಯವಹಾರದ ಕುರಿತಾಗಿ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾ ಪ್ರಶಂಶಿಸಿದ್ದಾರೆ.

ಬ್ಯಾರಿ ಜನಾಂಗವು ಅತ್ಯಂತ ಪ್ರಮುಖ ಜನಾಂಗವಾಗಿದ್ದು ಈ ಜನಾಂಗಕ್ಕೆ 1200 ವರ್ಷಗಳಿಂತಲೂ ಅಧಿಕವಾದ ದೀರ್ಘ ಇತಿಹಾಸವೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ದಕ್ಷಿಣ ಭಾರತದಲ್ಲಿ ಹಲವು ಸಂಸ್ಕೃತಿ, ಆಚಾರ-ವಿಚಾರಗಳು, ಸಂಪ್ರಾದಯಗಳನ್ನು ಕಾಣಬಹುದು. ಇದೇ ರೀತಿ ಈ ವಿವಿಧ ಸಂಸ್ಕೃತಿ, ಸಂಪ್ರದಾಯ, ಆಚಾರ-ವಿಚಾರಗಳನ್ನು ಹೊಂದಿರುವ ಬ್ಯಾರಿ ಜನಾಂಗ ಕರಾವಳಿಯಲ್ಲಿ ತನ್ನದೇ ಆದ ಸ್ವಂತ ಅಸ್ತಿತ್ವವನ್ನು ಪಡೆದಿದೆ ಮತ್ತು ವಿಶಿಷ್ಟ ಆಚಾರ ಸಂಸ್ತ್ರತಿಯನ್ನು ಈ ನಾಡಿಗೆ ಕೊಡುಗೆಯಾಗಿ ನೀಡುವುದರ ಜೊತೆಗೆ ಈ ನಾಡಿನ ಕೋಮು ಸಾಮರಸ್ಯ ಹಾಗೂ ಸರ್ವಸಮಾನತೆಯ ಮನೋಧರ್ಮಕ್ಕೆ ಅಪರೂಪ ಕಾಣಿಕೆಯನ್ನು ದೀರ್ಘಕಾಲದಿಂದ ನೀಡುತ್ತಾ ಬಂದಿದೆ.1

ಅರಬ್ ದೇಶದಿಂದ ವ್ಯಾಪಾರಿ ಜನ ಸಮೂಹ ಒಂದು ಈ ಕರಾವಳಿ ತುಳುನಾಡಿಗೆ ಪ್ರವೇಶಿಸಿ ಇಲ್ಲಿ ವ್ಯಾಪಾರ ವಾಣಿಜ್ಯ ಚಟುವಟಿಕೆಯಲ್ಲಿ ದೀರ್ಘಕಾಲದವರೆಗೆ ತಮ್ಮನ್ನು ತೊಡಗಿಸಿಕೊಂಡಿದ್ದು, ಅರೇಬಿಯಾದಿಂದ ನೌಕೆಯ ಮೂಲಕ ಸುಧೀರ್ಘ ಪ್ರಯಾಣ ಬೆಳೆಸಿ ಬಂದು ತಮ್ಮ ತಾಯ್ನಾಡಿಗೆ ಹಿಂದಿರುಗಿ ಹೋಗಲು ಸಾಧ್ಯವಿಲ್ಲದೆ, ಈ ನಾಡಲ್ಲಿ ನೆಲೆಯೂರಬೇಕಾಯಿತು. ತಮ್ಮ ಕುಟುಂಬವನ್ನು ಬಿಟ್ಟು ಬಂದ ಈ ಸಮೂಹ ಸ್ಥಳೀಯ ಹೆಂಗಸರನ್ನು ಮದುವೆ ಮಾಡಿಕೊಂಡು ತಮ್ಮ ಸಾಂಸಾರಿಕ ಜೀವನವನ್ನು ಇದೇ ನಾಡಲ್ಲಿ ಆರಂಭಿಸುವುದರೊಂದಿಗೆ ಕರಾವಳಿಯಲ್ಲಿ ಹೊಸದಾದ ಒಂದು ಸಂಸ್ಕೃತಿ ಹುಟ್ಟಿಕೊಳ್ಳಲು ಕಾರಣರಾಗುತ್ತಾರೆ. ಈ ರೀತಿಯಾಗಿ ಜನ್ಮ ತಾಳಿದ ಹೊಸ ಜನಾಂಗವನ್ನು ಬ್ಯಾರಿಗಳೆಂದು ಗುರುತಿಸಿರುವುದು ಗಮನಾರ್ಹ.2

ಸ್ಥಳೀಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ತಮ್ಮಲ್ಲಿನ ಧಾರ್ಮಿಕ ಪ್ರಜ್ಞೆ ಮತ್ತು ಜಾಗತೀಕರಣಕ್ಕೆ ಒಳಗೊಂಡು ಸಮುದಾಯದಲ್ಲಿದ್ದ ಮೇಲು–ಕೀಳು ಎಂಬ ಕಲ್ಪನೆ ಕಣ್ಮರೆಯಾಗುವಂತೆ ಮಾಡಿದರು. ಇದಕ್ಕೆ ಸ್ಪಷ್ಟವಾದ ಉದಾಹರಣೆ ಈ ಜನಾಂಗ ಪ್ರಾರ್ಥನೆ ಸಲ್ಲಿಸುವ ಮಸೀದಿಯಲ್ಲಿ ಕರಿಯ–ಬಿಳಿಯ, ಬಡವ–ಶ್ರೀಮಂತ, ಮೇಲು–ಕೀಳು ಎನ್ನುವ ಯಾವುದೇ ಭೇದ ಭಾವವಿಲ್ಲದೆ ಎಲ್ಲರೂ ಜೊತೆಯಾಗಿ ತಮ್ಮ ಪ್ರಾರ್ಥನೆ (ನಮಾಜ್) ನಿರ್ವಹಿಸುತ್ತಿರುವುದನ್ನು ಕಾಣಬಹುದು. ಈಗಾಗಲೇ ತಿಳಿಸಿದಂತೆ ಅರಬರು ವ್ಯಾಪಾರಕ್ಕಾಗಿ ದಕ್ಷಿಣ ಭಾರತದ ಕರಾವಳಿ ಪ್ರದೇಶಕ್ಕೆ ಬಂದು ಅಲ್ಲಿನ ಸ್ಥಳೀಯ ಸ್ತ್ರೀಯರನ್ನು ಮದುವೆಯಾದರು. ಅವರಲ್ಲಿ ಹುಟ್ಟಿಕೊಂಡ ಸಂತಾನವನ್ನು ನವಯತರು ಮತ್ತು ಕೊಂಕಣಿಗಳು (ಕೊಂಕಣ ಮುಸ್ಲಿಮರು) ಎಂದು ಕರೆಯಲ್ಪಟ್ಟರು. ಇವರು ತಮ್ಮ ತಾಯ್ನಾಡಿನ ಕೊಂಕಣಿ ಭಾಷೆಯನ್ನು ಮಾತೃ ಭಾಷೆಯನ್ನಾಗಿ ಮಾತನಾಡುತ್ತಾರೆ. ಕೇರಳಕ್ಕೆ ಬಂದ ಅರಬರು ಅಲ್ಲಿನ ಮಲೆಯಾಳ ಮಹಿಳೆಯರನ್ನು ಮದುವೆಯಾಗುವುದರೊಂದಿಗೆ ಅವರಲ್ಲಿ ಜನ್ಮ ತಾಳಿದ ಸಂತಾನ ಮಾಪ್ಲಾಗಳೆಂದು ಕರೆಯಲ್ಪಟ್ಟರು. ಅದೇ ರೀತಿಯಾಗಿ ಕರಾವಳಿ ಕರ್ನಾಟಕ ತುಳುನಾಡಿಗೆ ಆಗಮಿಸಿದ ಅರಬರು ಅಲ್ಲಿನ ಸ್ಥಳೀಯ ತುಳು ಮಹಿಳೆಯರನ್ನು ವಿವಾಹವಾಗುವುದರೊಂದಿಗೆ ಹುಟ್ಟಿಕೊಂಡ ಸಂತಾನವು ತಮ್ಮ ತಾಯ್ನುಡಿ ತುಳು ಭಾಷೆಯಾಗಿರುವುದರಿಂದ ಈ ಜನರನ್ನು ಬ್ಯಾರಿಗಳೆಂದು ಕರೆಯಲಾಗಿದೆ.3

ಬ್ಯಾರಿಯೆಂಬ ಜನಾಂಗ (ಸಮುದಾಯ) ಮುಸ್ಲಿಂ ಧರ್ಮವನ್ನು ಅನುಸರಿಸುತ್ತಿದ್ದು ಅವರ ಧಾರ್ಮಿಕ ಹಿನ್ನಲೆಯ ಗುರುತಿನಲ್ಲಿ ಮಲೆಯಾಳ ಭಾಷೆಯಿಂದಾಗಿ ಈ ಜನ ಮಲೆಯಾಳಿಗಳು ಎಂದೇ ತಿಳಿದಿದ್ದ ಕರಾವಳಿಯ ಕರ್ನಾಟಕದ  ಜನತೆಗೆ ಈ ಜನಾಂಗದ ಕುರಿತಾದ ಸಾಮಾಜಿಕ ಅಧ್ಯಯನದಿಂದ ಮತ್ತು ಸಂಶೋಧನೆಯಿಂದ ಈ ಬ್ಯಾರಿಗಳು ತುಳುನಾಡಿನವರು ಮತ್ತು ಅವರು ಆಡುವ ಭಾಷೆ ಬ್ಯಾರಿ ಭಾಷೆ ಎಂದು ತಿಳಿಸುವ ಅಗತ್ಯವಿದೆ.

ಸಾಂಸ್ಕೃತಿಕ ನೆಲೆಯಲ್ಲಿ ಬ್ಯಾರಿಗಳು 'ಬ್ಯಾರ' ಅಥವಾ 'ವ್ಯಾಪಾರ' ಮಾಡುವ ಜನರಾಗಿದ್ದು ಎಂದು ಸಹಜವಾಗಿ ತಿಳಿಯಲಾಗಿದೆ. ತುಳುನಾಡಿನ ಜೀವನದಲ್ಲಿ ತುಳುನಾಡಿನ ಜೀವನ ಶೈಲಿಯನ್ನೇ ಅಳವಡಿಸಿಕೊಂಡಿರುವುದು ಕಂಡು ಬಂದರೂ ಈ ಜನಸಮೂಹ ತುಳುನಾಡಿನ ಧಾರ್ಮಿಕ ನಂಬಿಕೆ ಹಾಗೂ ಆಚರಣೆಯಲ್ಲಿ ಭಿನ್ನವಾಗಿದೆ.4

ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಅತೀ ಪ್ರಾಚೀನ ಕಾಲದಿಂದಲೂ ಅರಬರು ವ್ಯಾಪಾರ ಮಾಡುತ್ತಿದ್ದರು. ಅವರ ಸಂಪರ್ಕಕ್ಕೆ ಬಂದ ವ್ಯಾಪಾರಿ ಸಮುದಾಯಗಳು ಧಾರ್ಮಿಕವಾಗಿ ಮತಾಂತರಗೊಂಡದಲ್ಲದೆ, ಅರಬೀ ಭಾಷೆಯ ಪ್ರಭಾವವು ತುಳು ಮತ್ತು ಮಲೆಯಾಳ ಭಾಷೆಗಳ ಮೇಲೆ ಬೀರಿರುವುದರೊಂದಿಗೆ ಹೊಸ ಭಾಷೆಯ ಸೃಷ್ಟಿಯಾಯಿತು. ಇದನ್ನು ಬ್ಯಾರಿ ಭಾಷೆ ಎಂದು ಗುರುತಿಸಲಾಗಿದೆ.

ತಮ್ಮ ಧಾರ್ಮಿಕತೆಯೊಂದಿಗೆ ಸ್ಥಳೀಯ ನಂಬಿಕೆಗಳನ್ನು ಮೈಗೂಡಿಸಿ ಸಾಮರಸ್ಯದ ಜೀವನವನ್ನು ನಡೆಸಿದ ನಿದರ್ಶನಗಳು ಜನಪದ ಸಾಹಿತ್ಯದಲ್ಲಿ ವಿಪುಲವಾಗಿ ಗೋಚರಿಸುತ್ತದೆ. ಈ ಜನಸಮೂಹ ಅರಬರೊಂದಿಗೆ ಸಂಪರ್ಕ ಬೆಳೆಸಿದರು. ವಿದೇಶಿ ಆಕ್ರಮಣದ ಸಂದರ್ಭದಲ್ಲಿ ಮುಖ್ಯವಾಗಿ ಪೋರ್ಚುಗೀಸರು ಉಳ್ಳಾಲ ಮಂಗಳೂರನ್ನು ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ಈ ಪ್ರದೇಶದ ರಾಣಿಯಾದ ಅಬ್ಬಕ್ಕ ರಾಣಿಯ ಸೈನಿಕರಾಗಿ ಈ ನಾಡಿಗಾಗಿ ಹೋರಾಡಿದ ಸತ್ಯ ದಾಖಲೆಗಳಿವೆ. ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ವಿರೋಧಿ ನೆಲೆಯಲ್ಲಿ ನಿಂತು, ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ವೈಯಕ್ತಿಕ ನೆಲೆಯಲ್ಲಿ ಜೈಲು ಸೇರಿ ಪ್ರಾಣಾರ್ಪಣೆ ಮಾಡಿದ ದೇಶಾಭಿಮಾನಿಗಳು ಕಾಣಸಿಗುತ್ತಾರೆ.5

ಸಾಮಾನ್ಯವಾಗಿ ಸಂಸ್ಕೃತಿ ಎಂದರೆ ಯಾವುದೇ ಜನಸಮುದಾಯದ ಆಚಾರ ವಿಚಾರ ಭಾವನೆ. ವಿವಿಧ ಅರ್ಥಗಳಿರುವ ಈ ಸಂಸ್ಕೃತಿಯೆನ್ನುವ ಪದವನ್ನು ಸಾಮಾನ್ಯವಾಗಿ ಸುಧಾರಿತ ಜೀವನ ಶೈಲಿಯನ್ನೆಬಹುದು. ಒಂದು ಜನಾಂಗ, ಭಾಷೆ ಆ ಸಮುದಾಯದ ಸಾಂಸ್ಕೃತಿಕ ಅವಿಭಾಜ್ಯ ಅಂಗವಾಗಿರುತ್ತದೆ. ಭಾಷೆಯನ್ನು ಸಂಸ್ಕೃತಿಯಿಂದ ಬೇರ್ಪಡಿಸಲು ಸಾಧ್ಯವಿಲ್ಲ ಈ ನೆಲೆಯಲ್ಲಿ ಬ್ಯಾರಿ ಸಮುದಾಯ ಕೂಡ ತನ್ನದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದೆಯೆನ್ನಬಹುದು.

ಬ್ಯಾರಿ ಸಮುದಾಯ ತುಳು, ಅರಬೀ, ಮಲೆಯಾಳದ ಪ್ರಭಾವದಿಂದ ಮಿಶ್ರ ಸಂಸ್ಕೃತಿಯನ್ನು ಹೊಂದಿದೆಯೆನ್ನಬಹದು. ಹಿಂದಿನ ತುಳುನಾಡಿನ ಸಮಾಜದಲ್ಲಿ ಉಚ್ಚ ಜಾತಿಯವರ ಪ್ರಾಬಲ್ಯ ಹೆಚ್ಚಾಗುತ್ತಾ ಜೈನ ಮತ್ತು ಬೌದ್ಧ ಧರ್ಮದ ಪ್ರಭಾವವು ಈ ನಾಡಿನಲ್ಲಿ ಕಡಿಮೆಯಾದಂತೆ ಕೆಳಜಾತಿಯವರು ಮೇಲ್ಜಾತಿಯವರ ಅಸಮಾನತೆ, ಮೇಲು-ಕೀಳು ಪದ್ಧತಿ, ಸಾಮಾಜಿಕ ಬಹಿಷ್ಕಾರಗಳಿಗೆ ಗುರಿಯಾಗಿದ್ದು ಈ ಸಂಧರ್ಭದಲ್ಲಿ ಇಸ್ಲಾಂ ಧರ್ಮವು ಅರಬ್ ಧರ್ಮ ಪ್ರಚಾರಕರ ಮೂಲಕ ಈ ತುಳುನಾಡಿಗೆ ಹರಡಿದಾಗ ಇಲ್ಲಿ ಹೊಸದೊಂದು ಸಂಸ್ಕೃತಿ ಜನ್ಮ ತಾಳಿತು. ಅದನ್ನೇ ಬ್ಯಾರಿ ಸಂಸ್ಕೃತಿಯೆಂದು ಗುರುತಿಸಲಾಗಿದೆ. ಈ ಹೊಸದಾದ ಸಂಸ್ಕೃತಿಯಲ್ಲಿ ಭಾಷೆ, ಸಾಹಿತ್ಯ, ಜನಪದ ಹಾಡು, ಕಥೆ, ಐತಿಹ್ಯ ಸೇರಿಕೊಂಡವು. ಆದರೆ ಬ್ಯಾರಿ ಸಾಹಿತ್ಯ ತನ್ನದೇ ಆದ ಸ್ವತಃ ಲಿಪಿಯಿಲ್ಲದ ಕಾರಣ ಮೊದಲು ಮೌಖಿಕವಾಗಿ ಬಳಕೆಯಲ್ಲಿತ್ತು.6

ಸಂಸ್ಕೃತಿಯೆನ್ನುವುದು ಮನುಷ್ಯನ ಜೀವನ ವಿಧಾನಕ್ಕೆ ಸಂಬಂಧಿಸಿದ್ದು ಅದು ಪ್ರಾದೇಶಿಕವಾದದ್ದು ಆಯಾ ಪ್ರಾದೇಶಿಕ ಭಾಷೆ, ಆಹಾರ, ಉಡುಪು, ಜೀವನ ಶೈಲಿ, ಪದ್ಧತಿ, ನಂಬಿಕೆಗಳ ವೃತ್ತಿಪರ ಅಚರಣೆಗಳು ಹಬ್ಬ ಹರಿದಿನ ಹೀಗೆ ಎಲ್ಲ ಪ್ರಮುಖ ಅಂಶಗಳನ್ನು ಒಳಗೊಂಡಿರುತ್ತದೆ. ಕರಾವಳಿ ಕರ್ನಾಟಕದ ತುಳುನಾಡು ಪ್ರದೇಶ ಹಲವು ಭಾಷೆ, ಜನಾಂಗ ಕಲೆ ಸಂಸ್ಕೃತಿಗೆ ಜನ್ಮವನ್ನು ನೀಡಿದ ನಾಡಾಗಿದೆ. ಈ ನಾಡಿನಲ್ಲಿ ಜನ್ಮ ತಾಳಿದ ಪ್ರತಿಯೊಂದು ಜನಾಂಗವು ತನ್ನದೇ ಆದ ವಿಶಿಷ್ಟ್ಯತೆಯನ್ನು ಪಡೆದಿದೆ. ತುಳುನಾಡಲ್ಲಿರುವ ಜಾತಿ, ಉಪಜಾತಿ, ಜನಾಂಗ ಭಾಷೆ ಬೇರೆ ಯಾವ ಪ್ರದೇಶದಲ್ಲಿ ಕಾಣ ಸಿಗುವುದಿಲ್ಲ.

ಈ ರೀತಿಯಾಗಿ ವಿಶಿಷ್ಟತೆಯನ್ನು ಪಡೆದು ಜನ್ಮ ತಾಳಿದ ತುಳುನಾಡ ಜನಂಗಗಳಲ್ಲಿ ಬ್ಯಾರಿ ಜನಾಮಗವು ಒಂದು. ಬ್ಯಾರಿ ಜನಾಂಗ, ಭಾಷೆ ಹಾಗೂ ಸಾಂಸ್ಕೃತಿಕ ರಂಗದಲ್ಲಿ ತನ್ನದೇ ಆದ ಪ್ರಭಾವ ಬೀರಿದೆ. ಈ ಜನಾಂಗ ಈಗಾಗಲೆ ತಿಳಿಸಿದಂತೆ ಕಾಸರಗೋಡಿನ ಚಂದ್ರಗಿರಿ ತೀರದಿಂದ ಕುಂದಾಪುರದ ಬಾರಕೂರವರೆಗೆ ತನ್ನದೇ ಆದ ಪ್ರಭಾವವನ್ನು ಬೀರಿದೆ.

ಇಂದು ಈ ಜನಾಂಗ ದೇಶ ವಿದೇಶಗಳಲ್ಲಿ ತನ್ನನ್ನು ಗುರುತಿಸಿಕೊಂಡಿದ್ದು, ಈ ತುಳುನಾಡು ಹಾಗೂ ದೇಶದ ಆಚಾರ – ವಿಚಾರಗಳಿಗೆ ತನ್ನದೇ ಆದ ವಿಶೇಷ ಕೊಡುಗೆಯನ್ನು ನೀಡುತ್ತಿದೆ. ಸಂಸ್ಕೃತಿಯು ಎಷ್ಟೇ ವರ್ಷಗಳು ಕಳೆದರೂ ನಶಿಸಿ ಹೋಗುವುದಿಲ್ಲ. ಆದರೆ ಕಾಲ ಕಾಲಕ್ಕೆ ತಕ್ಕಂತೆ ಕೆಲವು ಮಹತ್ತರವಾದ ಬದಲಾವಣೆಗಳು ಸಂಸ್ಕೃತಿಯಲ್ಲಿ ನಡೆಯುತ್ತದ್ದೆ, ಬ್ಯಾರಿ ಸಮುದಾಯದ ಜನರು ಸಮಾಜದಲ್ಲಿ ತಮ್ಮ ಭಾಷೆ, ಆಚರಣೆಗಳು, ಆರ್ಥಿಕ ವ್ಯವಹಾರಗಳಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಬ್ಯಾರಿ ಸಮುದಾಯ ತಮ್ಮದೇ ಸಂಸ್ಕೃತಿಯನ್ನು ಉಳಿಸಿ ಬೆಳೆಸಿ ಈ ನಾಡನ್ನು ಶ್ರೀಮಂತಗೊಳಿಸಿದೆ.7

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಗೊಂಡಿರುವ ಬ್ಯಾರಿಗಳಂದ ಧೀರ್ಘ ಇತಿಹಾಸವನ್ನು ಮತ್ತು ಸಂಸ್ಕೃತಿಯನ್ನು ಹೊಂದಿದ್ದು ಈ ಸಮುದಾಯದ ಕುರಿತಾಗಿ ಸಾಮಾಜಿಕ ವ್ಯವಸ್ಥೆಯ ಕುರಿತಾಗಿ ಮೊತ್ತ ಮೊದಲು ಈ ಸಮುದಾಯದ ಜನರು ಈ ನಾಡಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಪ್ರಮುಖ ಬ್ಯಾರಿ ಕುಟುಂಬಗಳು ಹಿಂದೆ ಕೃಷಿ ಪ್ರಧಾನವಾಗಿತ್ತು. ತಮ್ಮ ಮನೆಗಳ ಅಂಗಳವನ್ನು ಸೆಗಣಿಯಿಂದ ಗುಡಿಸಿ ಸಾರಿಸುತ್ತಿದ್ದರು. ಮತ್ತು ಅಂಗಳದ ಮೂಲೆಯಲ್ಲಿ ಇರುವ ದನದ ಕೊಟ್ಟಿಗೆಯಲ್ಲಿ ತುಂಬಾ ದನಗಳು, ಎಮ್ಮೆಗಳು, ಕೋಣಗಳನ್ನು ಸಾಕುವುದು ಮಾಮೂಲಾಗಿತ್ತು. ಆದರೆ ಇತ್ತೀಚೆಗೆ ಈ ಬ್ಯಾರಿಗಳು ಕೃಷಿ ಭೂಮಿಯಲ್ಲಿ ದುಡಿಯುವುದು ಕಣ್ಮರೆಯಾಗಿದೆ. ಇದಕ್ಕೆ ಮುಖ್ಯ ಕಾರಣ ಬಹುತೇಕ ಎಲ್ಲ ಬ್ಯಾರಿಗಳು ಉದ್ಯೋಗಕ್ಕಾಗಿ ಗಲ್ಫ್ ಮತ್ತು ಅರಬ್ ರಾಷ್ಟ್ರಗಳಿಗೆ ಮುಖ ಮಾಡುತ್ತಿರುವುದು. ಬಹುತೇಕ ಎಲ್ಲ ಬ್ಯಾರಿ ಕುಟುಂಬಗಳು ಹೊಲ ಗದ್ದೆಗಳನ್ನು ಮಾರಾಟ ಮಾಡಿ ನಗರ ಜೀವನದತ್ತ ಆಕರ್ಷಣೆಯಾಗುತ್ತಿರುವುದು ಇನ್ನೊಂದು ಮುಖ್ಯ ಕಾರಣವಾಗಿದೆ.

ಹೆಚ್ಚಿನ ಸಂಖ್ಯೆಯಲ್ಲಿ ಬಡತನದಿಂದ ಕೂಡಿದ ಈ ಸಮುದಾಯ ತಮ್ಮ ಜೀವನೋಪಾಯಕ್ಕಾಗಿ ಮೀನು, ವ್ಯಾಪಾರ, ಮಾಂಸದ ಮಾರಾಟ, ಸಣ್ಣ ಬಂಡಸಾಲೆ, ಜವಳಿ ವ್ಯಾಪಾರ, ಚರ್ಮದ ಮೆಟ್ಟುಗಳ ವ್ಯಾಪಾರ, ಅಲ್ಯುಮಿನಿಯಂ ಪಾತ್ರೆಗಳ ಮಾರಾಟ, ಕಬ್ಬಿಣ, ಪೇಪರ್, ಪ್ಲಾಸ್ಟಿಕ್, ಗುಜರಿ ವ್ಯಾಪಾರ ಹಾಗೂ ಕೃಷಿಯ ಒಕ್ಕಲುತನ, ಹೂವಿನ ವ್ಯಾಪಾರ, ತರಕಾರಿ ವ್ಯಾಪಾರ, ಹಣ್ಣು ಹಂಪಲುಗಳ ವ್ಯಾಪಾರ ಈ ರೀತಿಯ ಹಲವು ಪ್ರಮುಖ ವೃತ್ತಿಗಳನ್ನು ಕುಲ ಕಸುಬಿನಂತೆ ಇಂದಿಗೂ ಮುಂದುವರಿಸುತ್ತಾ ಬಂದಿರುವುದನ್ನು ಕಾಣಬಹುದು.

ಕೃಷಿಯನ್ನು ಮಾಡದ ಬ್ಯಾರಿ ಕುಟುಂಬಗಳು ದನಗಳನ್ನು ಹಾಲಿಗಾಗಿ ಸಾಕುತ್ತಿದ್ದು ಮಾಮೂಲಿಯಾಗಿತ್ತು. ಗದ್ದೆಯಲ್ಲಿ ಭತ್ತದ ಹೊಸಬೆಳೆ ತೆಗೆಯುವ ಆಚರಿಸುವ ಸಂಭ್ರಮವನ್ನು ತುಳುನಾಡಿನ ಸಂಪ್ರದಾಯದಂತೆ 'ಸುಗ್ಗಿ'ಯ ಕಾಲದಲ್ಲಿ ಬೆಳೆದ ಹೊಸ ಅಕ್ಕಿಯನ್ನು ಕನಿಷ್ಟ ನಲವತ್ತು ಮಕ್ಕಳಿಗೆ ಕೊಡಲಾಗಿದ್ದು, ಈ ರೀತಿಯ ಸಂಭ್ರಮಕ್ಕೆ ಬ್ಯಾರಿಗಳು ಪುದಿಯೊ ಅರಿರೆ ಚೋರು (ಹೊಸ ಅಕ್ಕಿಯ ಊಟ) ಎಂದು ಕರೆಯುತ್ತಾರೆ. ಹಿರಿಯ ಕೃಷಿಕರ ಮನೆಗಳಲ್ಲಿ ನಡೆಸುತ್ತಿದ್ದ ಈ ಕಾರ್ಯಕ್ರಮಕ್ಕೆ ಆ ಊರಿನ ಎಳೆಯ ಮಕ್ಕಳನ್ನು ಅಮಂತ್ರಿಸುತ್ತಿದ್ದರು. ಈ ಸಂಭ್ರಮದ ಸಂಕೇತವಾಗಿ ಹೊಸ ಭತ್ತದ ಕೊರಲನ್ನು ತಂದು ಮನೆಯ ಚಾವಡಿಯ ಎದುರಿನ ಜಂತಿಗೆ ಕಟ್ಟುತ್ತಿದ್ದರು. ಮತ್ತು ದೀಪಾವಳಿಯ ಸಂದರ್ಭದಲ್ಲಿ ತುಳುನಾಡ ಸಂಪ್ರದಾಯದಂತೆ ದನಕರುಗಳನ್ನು ಎತ್ತು, ಎಮ್ಮೆ ಕೋಣಗಳನ್ನು ಚೆನ್ನಾಗಿ ತಿಕ್ಕಿ, ತೊಳೆದು ಅವುಗಳನ್ನು ಸ್ನಾನ ಮಾಡಿಸಿ ಮನೆಯ ಹತ್ತಿರ ಬೇಲಿಗಳಲ್ಲಿ ಸಿಗುತ್ತಿದ್ದ ಹೂವುಗಳನ್ನು ತಂದು ಹಾರ ಮಾಡಿ ಹಾಕುತ್ತಿದ್ದರು. ಮತ್ತು ಬೆಳಗ್ಗೆ ದನ ಕರುಗಳಿಗೆ ಇಡ್ಲಿ ತಿನ್ನಿಸುತ್ತಿದ್ದರು. ದನಗಳನ್ನು ಕೇವಲ ಕೃಷಿಕರ ಕುಟುಂಬ ಮಾತ್ರ ಸಾಕುವುದಲ್ಲದೆ, ಇತರ ಇತರ ಬ್ಯಾರಿಗಳು ಸಾಕುತ್ತಿದ್ದರು.

ಇದರಿಂದ ಹಿಂದಿನ ಕಾಲದಲ್ಲಿ ಈ ಬ್ಯಾರಿ ಸಮುದಾಯ ತನ್ನ ಮುಖ್ಯ ಕಸುಬನ್ನಾಗಿ ಕೃಷಿಯನ್ನು ಅವಲಂಬಿಸಿರುವುದನ್ನು ಗಮನಿಸಿರಬಹುದು. ಬ್ಯಾರಿಗಳು ದನಕರುಗಳನ್ನು ಸಾಕಿದಂತೆಯೇ ಇತರ ಸಾಕು ಪ್ರಾಣಿಗಳಾದ ಕುರಿ, ಆಡುಗಳನ್ನು ಅಧಿಕವಾಗಿ ಸಾಕುತ್ತಿದ್ದರು. ಸಾಕಷ್ಟು ಬ್ಯಾರಿ ಕುಟುಂಬಗಳನ್ನು ಈ ಪ್ರಾಣಿಗಳು ಸಾಕಾಣಿಕೆಗೆ ಆದ್ಯತೆ ನೀಡುತ್ತಿರುವುದು ಗಮನಿಸಬಹುದಾಗಿದೆ. ಆದರೆ ಈ ಪ್ರಾಣಿಗಳನ್ನು ಅಧಿಕವಾಗಿ ತುಳುನಾಡಿನ ಯಾವುದೇ ತುಳುವರು ಸಾಕುವುದಿಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬ್ಯಾರಿಗಳ ಈ ಮೋಹಕ್ಕೆ ಧಾರ್ಮಿಕ ಹಿನ್ನಲೆಯೂ ಇದೆ. ಪ್ರವಾದಿ ಮಹಮ್ಮದ್ (ಸ.ಅ) ರವರು ಮೇಕೆ ಕುರಿಗಳನ್ನು ಸಾಕುತ್ತಿದ್ದರು, ಮೇಯಿಸುತ್ತಿದ್ದರು. ಅವರಿಗೆ ಈ ಪ್ರಾಣಿಗಳ ಮೇಲೆ ಅತ್ಯಂತ ವ್ಯಾಮೋಹವಿತ್ತೆಂದು ನಂಬಿರುವ ಬ್ಯಾರಿ ಸಮುದಾಯ ಈ ಪ್ರಾಣಿಗಳ ಸಾಕಾಣಿಕೆಯನ್ನು ಕಸುಬು ಮತ್ತು ಅರ್ಥಿಕ ದೃಷ್ಟಿಯಿಂದ ಹೆಚ್ಚಿನ ಆದ್ಯತೆ ಇಂದಿಗೂ ನೀಡುತ್ತಿರುವುದು ಗಮನಾರ್ಹವಾಗಿದೆ.

ಬ್ಯಾರಿಗಳು ಕೃಷಿಕರು ಹೇಗೆಯೋ ಅದೇ ರೀತಿಯಲ್ಲಿ ದನಗಳನ್ನು ಮಾರಾಟ ಮಾಡುವ ವ್ಯಾಪಾರಿಗಳಾಗಿದ್ದು ಕಂಡು ಬರುತ್ತಿದ್ದು ಬಹುತೇಕ ಬ್ಯಾರಿಗಳು ಇದನ್ನೇ ಆಹಾರದ ಭಾಗವಾಗಿ ಉಪಯೋಗಿಸುತ್ತಿದ್ದಾರೆ. ಆದರೆ ಇಂದು ಈ ಆಹಾರ ಪದ್ದತಿ ಮತ್ತು ವ್ಯಾಪಾರ ಹಲವು ಮುಖಂಡರಿಗೆ ರಾಜಕೀಯ ಬಂಡವಾಳವಾಗಿದ್ದು ಇದು ಜಿಲ್ಲೆಯಲ್ಲಿ ಸಾಮಾಜಿಕ ವೈಷಮ್ಯದ ಬೀಜ ಬಿತ್ತಲು ಮುಖ್ಯ ಕಾರಣವಾಗಿರುವುದು ಖೇದಕರ ಸಂಗತಿ.

ಕರಾವಳಿ ತುಳುನಾಡಿನಲ್ಲಿ ನೆಲೆಗೊಂಡಿರುವ ಬ್ಯಾರಿ ಸಮುದಾಯದ ಆಹಾರ ಕ್ರಮವು ವೈವಿಧ್ಯತೆ ಹಾಗೂ ಸರಳತೆಯಿಂದ ಕೂಡಿದೆ. ಬ್ಯಾರಿ ಸಮುದಾಯವು ತನ್ನ ಆಹಾರ ಸೇವನೆಯಲ್ಲಿ ಇಸ್ಲಾಂ ಸಂಪ್ರದಾಯದಂತೆ ಮುಖ್ಯವಾಗಿ ಹಂದಿ ಮಾಂಸ ಮತ್ತು ಮದ್ಯಪಾನವನ್ನು ನಿಷೇಧೀಸಿದೆ. ಇದರ ಸೇವನೆಗೆ ಇಸ್ಲಾಂ ಅನುಮತಿಸದೆ ಇರುವುದರಿಂದ ಉಳಿದ ಎಲ್ಲಾ ರೀತಿಯ ವ್ಯಾಪಾರ, ಉದ್ದಿಮೆ, ಕೂಲಿ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದು ಕೃಷಿಯಲ್ಲಿ ಆಸಕ್ತಿಯಿಂದ ತೊಡಗಿಸಿಕೊಂಡಿದ್ದ ಬ್ಯಾರಿಗಳು ತುಳುನಾಡಿನ ಸಂಪ್ರದಾಯದಂತೆ ಸುಗ್ಗಿಯ ಕಾಲದ ಹೊಸದಾಗಿ ಬೆಳೆದ ಅಕ್ಕಿಯನ್ನು ಕನಿಷ್ಟ ಪಕ್ಷ 40 ಮಕ್ಕಳಿಗೆ ಕೊಡುತ್ತಿದ್ದರು. ಇದನ್ನು ಪುದಿಯೋ ಅರಿರೆ ಚೋರ್ (ಹೊಸ ಅಕ್ಕಿಯ ಊಟ) ಎಂದು ಕರೆಯಲಾಗುತ್ತಿತ್ತು. ಇಂತಹ ಕಾರ್ಯಕ್ರಮಕ್ಕೆ ಊರಿನ ಎಳೆಯ ಮಕ್ಕಳನ್ನು ಆಮಂತ್ರಿಸುತ್ತಿದ್ದರು. ಇದು ಕೇವಲ ಮಕ್ಕಳಿಗೆ ಮಾತ್ರ ಕೊಡುವ ಕ್ರಮವಾಗಿದ್ದ ಕಾರಣದಿಂದ ಇದಕ್ಕೆ ಮಕ್ಕಳೆ ಕಜ (ಮಕ್ಕಳ ಗಂಜಿ) ಎನ್ನಲಾಗುತ್ತಿತ್ತು.

ಗಂಜಿಗೆ ಹೆಚ್ಚಿನ ಪ್ರಮಾಣದಲ್ಲಿ ಬೆಲ್ಲವನ್ನು ಬೆರೆಸುತ್ತಿದ್ದುದರಿಂದ ಈ ಗಂಜಿಯನ್ನು ಚಕ್ಕರೆ ಕಜ (ಬೆಲ್ಲದ ಗಂಜಿ) ಎನ್ನುತ್ತಿದ್ದರು. ಈ ಗಂಜಿಯನ್ನು ಮುಖ್ಯವಾಗಿ ಮದರಸ ವಿದ್ಯಾರ್ಥಿಗಳಿಗೆ ವಿತರಣೆ ಮಾಡಿ ಎಲ್ಲಾ ಮಕ್ಕಳು ಜೊತೆಯಾಗಿ ತಿನ್ನುವಂತೆ ಮಾಡುತ್ತಿದ್ದರು. ವಿಶೇಷ ದುಅ (ಪ್ರಾರ್ಥನೆ) ಮಾಡಿಸಿ ಅನಾರೋಗ್ಯ ಅಥವಾ ಕಷ್ಟ ಕಾರ್ಪಣ್ಯಗಳು ಎದುರಾದಾಗ ಹರಕೆ ಮಾಡಿ ಅದನ್ನು ಸಂದಾಯ ಮಾಡಲು ಚಕ್ಕರೆ ಕಜ ಯನ್ನು ನೀಡಲಾಗುತ್ತಿತ್ತು. ಕೆಲವೆಡೆ ಇದನ್ನು ಸಡಗರ ಮತ್ತು ಸಂಭ್ರಮ ಹಾಗೂ ವಿಶಿಷ್ಟ ರೀತಿಯಲ್ಲಿ ಆಚರಿಸುತ್ತಾರೆ. ಹೊಸ ಬೆಳೆಯ ಭತ್ತದ ಅಕ್ಕಿಯನ್ನು ಮನೆಯೊಳಗಿಡುವ ಮುಂಚೆ ಹೊಸ ಅಕ್ಕಿ ಉಣ್ಣುವ ಹಬ್ಬವೆಂದು ಆಚರಿಸಲಾಗುತ್ತಿತ್ತು.

ಸಾಮಾನ್ಯವಾಗಿ ಬ್ಯಾರಿಗಳು ದಿನಾಲೂ ಸೇವಿಸುವುದು ಸಾಮಾನ್ಯ ಕುಚ್ಚಲಕ್ಕಿ ಊಟ. ಇದನ್ನು ಪೊಟ್ಟು ಚೋರು ಎನ್ನುತ್ತಾರೆ. ಹಿಂದೆ ಮನೆಯಲ್ಲಿ ಎಲ್ಲರೂ ನೆಲದಲ್ಲಿ ಕುಳಿತು ಊಟ ಮಾಡುತ್ತಿದ್ದರು. ಈ ಉಟವನ್ನು ತರಕಾರಿ, ಮೀನು, ಮಾಂಸ, ತಯರ್, ಮೋರ್ (ಮೊಸರು) ಅನ್ನು ಬಳಸುವುದು ಸಾಮಾನ್ಯ. ವಿಶೇಷವಾಗಿ ಈ ಭಾಗದ ಬ್ಯಾರಿಗಳ ನೆಚ್ಚಿನ ಆಹಾರ, ಮೀನು, ಮಸಾಲೆ ಬೆರೆಸಿದ ಮೀನನ್ನು ಎಣ್ಣೆಯಲ್ಲಿ ಕಾಯಿಸುವುದನ್ನು 'ಕಾಯಿಚೆದ್' ಎನ್ನುತ್ತಾರೆ. ಮಣ್ಣಿನ ಮಡಕೆಯಲ್ಲಿಟ್ಟು ಅಡಿಭಾಗಕ್ಕೆ ಬೆಂಕಿ ಕೆಂಡವನ್ನು ಹಾಕಿ ಮೀನನ್ನು ಮತ್ತೆ ಎಣ್ಣೆಯಲ್ಲಿ ಹಾಕಿ ಕರೆದರೆ ಅದನ್ನು 'ಪೋರ್ಚೆದ್' ಎನ್ನುವರು. ಮೊಟ್ಟೆಯನ್ನು ವಿವಿಧ ರೀತಿಯಲ್ಲಿ ಸೇವಿಸುವ ಬ್ಯಾರಿಗಳು ಅದನ್ನು ಮುಖ್ಯವಾಗಿ ಮುಟ್ಟೆಕಾಚೆದ್ (ಆಮ್ಲೆಟ್) ಮೊಟ್ಟೆ ಬಾಯಿಲ್ ಮಾಡಿದರೆ ಅದನ್ನು (ಮುಟ್ಟೆ ಬೇಪಾಟಯೇದ್) ಎನ್ನುತ್ತಾರೆ. ಇದಲ್ಲದೆ ಬೀಫ್ ಕರಿ, ಸುಕ್ಕ, ಚಿಲ್ಲಿ, ಮಟನ್ ಕರಿ, ಮಟನ್ ಸುಕ್ಕ, ಕೋಳಿ ಸಾಂಬಾರ್, ಕೋಳಿ ಪ್ರೈ, ಚಿಕನ್ ೬೦ ಮೊದಲಾದ ಮಾಂಸಾಹಾರಿ ಬ್ಯಾರಿಗಳ ಅತೀ ಪ್ರಿಯವಾದ ಆಹಾರವಾಗಿದೆ. ತರಕಾರಿಯನ್ನು ಸೇವಿಸುವ ಬ್ಯಾರಿಗಳು, ತರಕಾರಿ ಸಾಂಬಾರ್, ಪೊಡಿಕರಿ (ಬರ್ತೆಕರಿ) ಪಲ್ಯ ಎಂದು ಕರೆಯುತ್ತಾರೆ ಇನ್ನು ಚಕ್ಕೆ ಕೂರುಡೆ ಪೊಡಿಕರಿ, ಪೊಡಿ ಎಟ್ಟಿರೆ ಚಟ್ನಿ, ಇವರು ಸೇವಿಸುವ ಸಾಮಾನ್ಯ ಆಹಾರವಾಗಿದೆ. ಬಿರಿಯಾಣಿ ಮತ್ತು ಗೀ ರೈಸ್ ಬ್ಯಾರಿಗಳ ಹಬ್ಬ ಹರಿದಿನ, ನೆಂಟರನ್ನು ಅತಿಥಿಗಳನ್ನು ಸತ್ಕರಿಸಲು ಮಾಡುವ ವಿಶೇಷ ಊಟವಾಗಿದೆ. 8

ಬ್ಯಾರಿಗಳು ಉಪಹಾರ ಸೇವನೆಯಲ್ಲಿ ಮುಖ್ಯವಾಗಿ ಬಿಸೆಲಿಲ್ ಬೀತಿಯೇ ಅಪ್ಪ, ಬಿಸೆಲಿಡಪ್ಪ, ಕಲ್ತಪ್ಪ, ಇರ್‌ಮನ್‌ಡೇಅಪ್ಪ (ಸೇಮಿಗೆ) ನೇವರಿ, ತನ್ನಿಪೋಳೆ (ನೀರುದೋಸೆ) ಪೂಪಾಲೆಯೆಂದು, ಪುಳುಚೊ ಪೋಲೆ (ಪುಳಿ ದೋಸೆ) ಪಿಂಡಿ (ಕಡುಬು) ತನ್ನಿಪಿಂಡೆ, ಕೌಲು ಪಿಂಡಿ, ಎಣ್ಣೆ ಅಪ್ಪ, ಎಣ್ಣೆಲ್ ಬೀತಿಯೇ ಅಪ್ಪ, ಎನ್ನೆಲ್ ಕಾಚ್ ಅಪ್ಪ, ಗುಳಅಪ್ಪ, ನೈಯಪ್ಪ, ಪೂಅಪ್ಪ, ಕಿನ್ನತಪ್ಪ, ಚಕ್ಕೆಡಪ್ಪ (ಹಲಸಿನ ಅಪ್ಪ) ಪತ್ತ್‌ರ್, ಬಾಲೆಡೊ ಎಲೆಡೊ ಅಪ್ಪ, ಚಕ್ಕರೆಅಪ್ಪ, ಮಂಞಲ್ ಅಪ್ಪ, ಇಡ್ಲಿ, ಉಂಡೆ, ಬಾನಲೆಡೆ ಅಪ್ಪ, ಪೂರಿ, ಚಪಾತಿ, ಸಜ್ಜಿಗೆ ಇತ್ಯಾದಿ ಪ್ರಮುಖ ಉಪಹಾರಗಳು. ರಂಜಾನ್ ತಿಂಗಳಲ್ಲಿ ವಿಶೇಷವಾದ ಕೆಲವು ಆಹಾರವನ್ನು ತಯಾರು ಮಾಡುವ ಬ್ಯಾರಿಗಳು ಮುಖ್ಯವಾಗಿ ತ್ಯಾಞದೇ ಕಞ, ಸೋಜಿ, ಚೊರೆಡೇ ಮನ್ನಿ, ಮೆತ್ತೆಡೇ ಮನ್ನಿ, ಕಡ್ಲೆ ಮನ್ನಿ ಇತ್ಯಾದಿಗಳ ಜೊತೆಗೆ ಸೀರ್ ಕುರುಮ, ಪಯೇರ್ ತನ್ನಿ, ಕಸ್-ಕಸ್, ಇಸ್‌ಮುಕೋಲು, ಸರ್ಬತ್, ಜ್ಯೂಸ್ ಗಳನ್ನು ಕುಡಿಯುವುದು ವಿಶೇಷವಾಗಿದೆ.

ಬ್ಯಾರಿಗಳು ತಮ್ಮ ಎಳೆಯ ಪ್ರಾಯದ ಮಕ್ಕಳು ತೀರಿಕೊಂಡಾಗ ಅವರ ಸವಿನೆನಪಿಗಾಗಿ ಆರ್ಥಿಕತೆಗೆ ಅನುಗುಣವಾಗಿ ನೆರೆಯ ಎಲ್ಲ ಮಕ್ಕಳಿಗೆ ಹಾಲಿಗೆ ಬಾಳೆ ಹಣ್ಣನ್ನು ಕೊಡುವ ಪದ್ದತಿ ಗ್ರಾಮಾಂತರ ಪ್ರದೇಶಗಳಲ್ಲಿ ಇಂದಿಗೂ ಬಳಕೆಯಲ್ಲಿದೆ. ಇದನ್ನು 'ಪಾಲುಂಬಾಲೆ' ಎನ್ನುತ್ತಾರೆ. ಇದರ ಮುಖ್ಯ ಉದ್ದೇಶ ತೀರಿಹೋದ ಮಕ್ಕಳನ್ನು ಜ್ಞಾಪಕಕ್ಕೆ ತರುವುದು ಮಾತ್ರವಲ್ಲದೆ ಅವರ ಆತ್ಮಕ್ಕೆ ಮಗ್ಫಿರತ್‌ಗಾಗಿ ಪ್ರಾರ್ಥನೆ ಸಲ್ಲಿಸುವುದಾಗಿದೆ. ಬ್ಯಾರಿಗಳ ಉಡುಪುಗಳು ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಇತರ ಜನಾಂಗದವರನ್ನು ತನ್ನತ್ತ ಆಕರ್ಷಿಸುವಂತೆ ಬ್ಯಾರಿಗಳ ಉಡುಪು ಮಾಡುತ್ತವೆ.9

ಮುಖ್ಯವಾಗಿ ಪ್ರಾಚೀನ ಬ್ಯಾರಿ ಮಹಿಳೆಯರು ಕಪ್ಪು ಬಣ್ಣದ ಬುರ್ಖಾದ ಬದಲು ಕೆಂಪು ಅಥವಾ ಕಾವಿ ಬಣ್ಣದ ಮತ್ತು ಬಿಳಿ-ಕಪ್ಪು ಪಟ್ಟಿಗಳಿದ್ದ 'ವಲ್ಲ'ಯನ್ನು ಬರೀ ಕಣ್ಣುಗಳು ಮಾತ್ರ ಕಾಣುವ ರೀತಿಯಲ್ಲಿ ಧರಿಸುತ್ತಿದ್ದರು. ಬಡವರು, ಕೆಳವರ್ಗದ ಮಹಿಳೆಯರು ಸಾಧಾರಣ ದರ್ಜೆಯ ಬಟ್ಟೆಯನ್ನು ಧರಿಸುತ್ತಿದ್ದರು.
ಇದು ಕ್ರಮೇಣ ಕಾಲಂತರದಲ್ಲಿ ಕಣ್ಮರೆಯಾಗಿ ಕಪ್ಪು ಬಣ್ಣದ ಬುರ್ಖಾ ಧರಿಸುವುದು ಆರಂಭವಾಯಿತು. ಇತ್ತೀಚೆಗೆ ಈ ಬುರ್ಖದಲ್ಲಿ ವಿವಿಧ ರೀತಿಯ ನವನವೀನ ವಿನ್ಯಾಸದ ನೀಲಿ, ಹಸಿರು, ಕಂದು ಬಣ್ಣದ ಬುರ್ಖಾ, ಶಾಲ್ ಬುರ್ಖಾ ಮಾರುಕಟ್ಟೆಯಲ್ಲಿ ಕಂಡು ಬರುತ್ತದೆ. ಇದು ಈಗಿನ ಬ್ಯಾರಿ ಮಹಿಳೆಯರ ನೆಚ್ಚಿನ ಬುರ್ಖಾಧಾರಣೆಯಾಗಿದೆ. 10

ಬ್ಯಾರಿ ಮಹಿಳೆಯರು ಮದುವೆ ಮತ್ತಿತರ ಸಮಾರಂಭಗಳಿಗೆ ಬನಾರಸ್, ಫ್ಯಾನ್ಸಿ ಮೊದಲಾದ ಸೀರೆಗಳನ್ನು ತೊಡುತ್ತಿದ್ದು, ಗದ್ದೆ ಕೆಲಸಕ್ಕೆ ಹೋಗುವ ಬ್ಯಾರಿ ಮಹಿಳೆಯರು ದಪ್ಪ ನೂಲಿನ ಹಸಿರು ಬಣ್ಣದ ಸೀರೆ ಧರಿಸುತ್ತಿದ್ದರು. ವಿಶೇಷವಾಗಿ ಬ್ಯಾರಿ ಸ್ತ್ರೀಯರು ನಮಾಝ್ (ಪ್ರಾರ್ಥನೆ) ಸಲ್ಲಿಸುವಾಗ ಧರಿಸುವ ಬುರ್ಖಾವನ್ನು ಹೊಂದಿದ ಬಟ್ಟೆಯನ್ನು ಜುಬ್ಬಮಕ್ಕನೆ ಅಥವಾ ಬಿಳಿ ವಸ್ತ್ರ ಎನ್ನುತ್ತಾರೆ. ಈ ಮಹಿಳೆಯರು ಮನೆಯಲ್ಲಿರುವ ಸಂದರ್ಭದಲ್ಲಿ ಮತ್ತು ಮನೆಯಿಂದ ಹೊರಗೆ ಹೋಗುವ ಸಂದರ್ಭದಲ್ಲಿ ತಲೆಯನ್ನು ಮುಚ್ಚಿಕೊಳ್ಳಲು ಧರಿಸುವ ಬಟ್ಟೆಯನ್ನು ಉರ್ಮಾಲ್ ಅಥವಾ ಎಲಸರ (ಸ್ಕಾರ್ಫ್) ಎನ್ನುತ್ತಾರೆ. ಶ್ರೀಮಂತ ಬ್ಯಾರಿ ಮಹಿಳೆಯರು ಪಟ್ಟ್ ಉರ್ಮಾಲ್ ಅಥವಾ ಪಟ್ಟ್ ಎಲಸರ ಧರಿಸುತ್ತಾರೆ.

ಮಾಪಿಳ್ಳೆ ಸ್ತ್ರೀಯರಂತೆ ಬ್ಯಾರಿ ಮಹಿಳೆಯರು ಬೆಲ್ತೆ ಕುಪಾಯ (ಬಿಳಿ ಕುಪ್ಪಸ) ಧರಿಸುತ್ತಾರೆ. ಪ್ರಾಚೀನ ಬ್ಯಾರಿ ಮಹಿಳೆಯರು ಬುಟ್ಟೆ ಕುಪಾಯ ವೆಂಬ ತೆಳು ಹಾಗೂ ಸಡಿಲವಾದ ಅಂಗಿಯಂತಹ ಉಡುಗೆಯನ್ನು ತೊಡುತ್ತಾರೆ. ಬ್ಯಾರಿ ಸ್ತ್ರೀಯರು ಅರ್ಗಂಟ ಕುಪಾಯ ಎಂಬ ಹಳದಿ ಸೀರೆ, ಪೊಡಿಕಲವೆಂಬ ಕೆಂಪು ಸೀರೆ, ವೊಲ್ಲಿ, ಜೋಡುವೊಲ್ಲಿ,ಪಟ್ಟ್‌ವೊಲ್ಲಿ, ಮಞಿಲ್‌ವೊಲ್ಲಿ, ಎಲಸರ, ಉರ್ಮಾಲ್, ಧರಿಸುತ್ತಾರೆ. ಸಾಮಾನ್ಯವಾಗಿ ಬ್ಯಾರಿ ಹೆಣ್ಮಕ್ಕಳು ಲಂಗ ಮತ್ತು ರವಿಕೆಯನ್ನು ಧರಿಸುತ್ತಾರೆ. ಇತ್ತೀಚೆಗೆ ಅದು ನೈಟಿ, ಮಿಡಿ, ಮೊದಲಾದ ಬಟ್ಟೆ ಬರೆಗಳು ಹೆಚ್ಚಾಗಿ ಬ್ಯಾರಿ ಹೆಣ್ಮಕ್ಕಳು ಬಳಸುವುದನ್ನು ಕಾಣಬಹುದು.11

ಬ್ಯಾರಿ ಗಂಡಸರು ವಿಶಿಷ್ಟವಾದ ಹಾಗೂ ನವನವೀನ ಉಡುಗೆ ತೊಡುಗೆಗಳನ್ನು ಧರಿಸುತ್ತಿದ್ದರು. ಬ್ಯಾರಿ ಗಂಡಸರಲ್ಲಿ ಮುಖ್ಯವಾದ ಉಡುಗೆಗಳು ಬಿಳಿ ಬಣ್ಣದ ಚಟ್ಟೆ–ಮುಂಡು (ಬಿಳಿ ಅಂಗಿ ಮತ್ತು ಲುಂಗಿ) ಹಾಗೂ ತಲೆಗೆ ಬಿಳಿ ಮುಂಡಾಸು ಬಳಸುತ್ತಾರೆ. ಸೊಂಟಕ್ಕೆ ಹಸಿರು ಬಣ್ಣದ ರಾಣಿ ಮಾರ್ಕಿನ ಬೆಲ್ಟ್ ಕಟ್ಟುತ್ತಿದ್ದರು. ಹಿಂದಿನ ಬ್ಯಾರಿ ಗಂಡಸರು ತಾಮ್ರದ ಎರಡು ಗುಂಡಿಯ ನಡುವೆ ನೂಲು ಇರುವ ಫೈರಾನಿಯಂತಹ ಬಟ್ಟೆಯನ್ನು ಧರಿಸುತ್ತಿದ್ದು, ಇದನ್ನು (ಬಂಡಿ) ಎನ್ನುತ್ತಾರೆ. ಸಾಮಾನ್ಯವಾಗಿ ಬ್ಯಾರಿ ಗಂಡು ಮಕ್ಕಳು ಇಚಾರ್ (ಚಡ್ಡಿ) ಧರಿಸಿದರೆ ಬ್ಯಾರಿ ಗಂಡಸರ ಬಿಳಿ ಅಥವಾ ಅಡ್ಡಗೆರೆಯ ಬಣ್ಣ ಬಣ್ಣದ ಲುಂಗಿ ಹಾಗೂ ಅಂಗಿಯನ್ನು ಹೆಚ್ಚಾಗಿ ಬಳಸುತ್ತಾರೆ. ಹೆಚ್ಚಾಗಿ ಬ್ಯಾರಿ ಗಂಡಸರು ಲುಂಗಿಯ ಕಚ್ಚೆ ಕಟ್ಟುತ್ತಾರೆ. ಕತ್ತಿನ ಹಿಂಬದಿಗೆ ತೂವಾಲ್ (ಟವೆಲ್) ಸಿಕ್ಕಿಸುತ್ತಾರೆ. ಮತ್ತು ಅರ್ಧ ತೋಳಿನ ಗಂಜಿಬಲರಾಕ್ (ಬನಿಯನ್) ತೊಡುವುದು ಕೂಡ ಬ್ಯಾರಿ ಗಂಡಸರು ಸಾಮಾನ್ಯವಾಗಿದೆ. ಇತ್ತೀಚೆಗೆ ಬ್ಯಾರಿ ಗಂಡಸರ ಮತ್ತು ಮಕ್ಕಳು ಹೆಚ್ಚು ಹೆಚ್ಚಾಗಿ ಪಾಶ್ಚಿಮಾತ್ಯ ಪರಂಪರೆಯ ಹೆಚ್ಚಿನ ನವನವೀನ ಹೆಸರುಗಳ ಉಡುಗೆ ತೊಡುಗೆಗಳು ಹೆಚ್ಚಾಗಿ ಬಳಸುತ್ತಿರುವುದು ಸಾಮಾನ್ಯವಾಗಿದೆ. 12

ಸಾಮಾಜಿಕವಾಗಿ ಬ್ಯಾರಿ ಸಮಾಜದಲ್ಲಿನ ಕುಟುಂಬ ಪ್ರಮುಖ ಸ್ಥಾನವನ್ನು ಹೊಂದಿದೆ. ಬ್ಯಾರಿ ಕುಟುಂಬ ಹಲವು ಸ್ಥಳೀಯ ಅಂಶಗಳು ಮತ್ತು ಇಸ್ಲಾಮಿನ ಕಟ್ಟಳೆಗಳನ್ನು ಒಳಗೊಂಡ ಹೊಸ ಅರೆ ಜಮೀನ್ದಾರಿ ವ್ಯವಸ್ಥೆಯಾಗಿತ್ತು. ಹೊಸ ಕುಟುಂಬ ವ್ಯವಸ್ಥೆ ಹಲವು ವಿಷಯಗಳಲ್ಲಿ ಸ್ಥಳೀಯ ಅನಫಿ ಹಾಗೂ ಮಾಪಿಳ್ಳೆಯವರಿಗಿಂತ ವಿಭಿನ್ನವಾಗಿದೆ. ಆದರೆ ಇವರ ಧಾರ್ಮಿಕ ಆಚರಣೆಗಳು ಸಮಾನವಾಗಿದ್ದರೂ ಇವರ ಜೀವನ ಶೈಲಿ ಸ್ಥಳೀಯ ಸಂಪ್ರದಾಯ ಮತ್ತು ಆಚರಣೆಗಳಿಂದ ಪ್ರಭಾವಿತಗೊಂಡು ಇತರರಿಗಿಂತ ವಿಭಿನ್ನವಾಗಿದೆ. ಸ್ಥಳೀಯ ತುಳುವರಾಗಿದ್ದ ಈ ಬ್ಯಾರಿಗಳು ನಂತರದ ದಿನಗಳಲ್ಲಿ ಇಸ್ಲಾಂಗೆ ಮತಾಂತರಗೊಂಡರು. ಮೂಲ ಸಂಸ್ಕೃತಿಯ ಕುರುಹುಗಳು ಕೆಲಮಟ್ಟಿಗೆ ಇನ್ನು ಉಳಿದಿದೆ. 13

20ನೇ ಶತಮಾನದ ಆರಂಭದಲ್ಲಿ ನಡೆದಿರುವ ಧಾರ್ಮಿಕ ಶಿಕ್ಷಣ ಮತ್ತು ಪರಿಣಾಮಕಾರಿ ಸುಧಾರಣೆಗಳು ಸಮಾಜದಲ್ಲಿ ನಿಧಾನವಾಗಿ ಬದಲಾವಣೆಗಳಿಗೆ ಹಾದಿ ಮಾಡಿತು. ಇದರಿಂದಾಗಿ ಮಾಪಿಳ್ಳೆ ಮೌಲ್ವಿಗಳ ಮಾರ್ಗದರ್ಶನದ ಪ್ರಕಾರ ಇಸ್ಲಾಂನ ಸಿದ್ಧಾಂತಗಳಂತೆ ಬದುಕು ಆರಂಭಿಸಿದರು. ಸುಧಾರಣೆಗಳ ಪರಿಣಾಮದಿಂದಲೂ ಈ ಸಮುದಾಯ ಸ್ಥಳೀಯ ಸಂಪ್ರದಾಯಗಳನ್ನು ಮುಂದುವರಿಸಿವೆ.

ಸಾಮಾನ್ಯವಾಗಿ ಹಿಂದೆ ಇದ್ದಂತಹ ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಮನೆಯ ಯಜಮಾನ ಪ್ರಮುಖವಾಗಿದ್ದು ಉಳಿದ ಕುಟುಂಬದ ಸದಸ್ಯರು ಯಜಮಾನನ ಮಾಸುಗಳನ್ನು ಕಟ್ಟು ನಿಟ್ಟಾಗಿ ಗೌರವ ನೀಡುವದರೊಂದಿಗೆ ಪಾಲಿಸುತ್ತಿದ್ದರು. ಕಾಲ ಕ್ರಮೇಣ ಆಧುನಿಕತೆ ಮತ್ತು ಜಾಗತೀಕರಣದ ಪರಿಣಾಮದಿಂದ ಸುದಾರಣೆಯನ್ನು ಕಂಡ ಬ್ಯಾರಿ ಕುಟುಂಬವು ಸಂಪೂರ್ಣವಾಗಿ ಚದುರಿ ಹೋಗಿ ವಿಭಕ್ತ ಕುಟುಂಬವಾಗಿ ಬದಲಾಯಿತು. ಇದಕ್ಕೆ ಪ್ರಮುಖ ಕಾರಣಗಳು : ಶಿಕ್ಷಿತರಾದ ಬ್ಯಾರಿಗಳು ಉನ್ನತ ವಿದ್ಯಾಭ್ಯಾಸ ಹಾಗೂ ಉದ್ಯೋಗಕ್ಕಾಗಿ ಅಥವಾ ಉದ್ಯೋಗವನ್ನು ಹರಸುತ್ತಾ ನಗರಗಳಿಗೆ ಬಂದು ಅಲ್ಲೇ ತಮ್ಮ ಉದ್ಯೋಗವನ್ನು ನಿರ್ವಹಿಸುತ್ತಾ ತಮ್ಮ ಕುಟುಂಬದ ಸದಸ್ಯರೊಂದಿಗೆ ನೆಲೆಸುವುದರ ಪರಿಣಾಮವಾಗಿ ಈ ಬ್ಯಾರಿ ಕುಟುಂಬ ಸಂಪೂರ್ಣವಾಗಿ ಛಿದ್ರಗೊಂಡಿತು ಎನ್ನಬಹುದು.14

ಕುಟುಂಬ ಜೀವನ ಕುರಿತು ಇಸ್ಲಾಂ ಉನ್ನತವಾದ ಚಿತ್ರಣವನ್ನು ಒದಗಿಸುತ್ತದೆ. ಮುಸ್ಲಿಂ ಕುಟುಂಬದಲ್ಲಿ ಮುಖ್ಯವಾಗಿ ಗಂಡ ಹೆಂಡತಿ ಮತ್ತು ಅವರ ಮಕ್ಕಳು ಈ ಎಲ್ಲರ ಕರ್ತವ್ಯಗಳ ಕುರಿತಾಗಿ ಆದರ್ಶ ಕುಟುಂಬ ಜೀವನದ ಬಗ್ಗೆ ಅವರು ನಿರ್ವಹಿಸಬೇಕಾದ ಪ್ರಮುಖ ಕರ್ತವ್ಯಗಳ ಬಗ್ಗೆ ಇಸ್ಲಾಂ ನಿಗದಿಪಡಿಸಿದೆ. ಇವುಗಳ ಕುರಿತಾಗಿ ಮೌಲ್ವಿಗಳು (ಗುರು) ಮದರಸಾ ಶಿಕ್ಷಣದಲ್ಲಿ ಬೋಧಿಸುತ್ತಾರೆ. ಕುಟುಂಬದ ಎಲ್ಲಾ ಸದಸ್ಯರು ಸಾಮಾನ್ಯವಾಗಿ ಅವರವರ ಜವಾಬ್ದಾರಿಯ ಕುರಿತು ಅರಿವನ್ನು ಹೊಂದಿರುತ್ತಾರೆ. ಮುಖ್ಯವಾಗಿ ಬ್ಯಾರಿ ಕುಟುಂಬಗಳಮಿಲನ ಮದುವೆ ಸಮಾರಂಭಗಳಲ್ಲಿ ಮಿಲನಗೊಳ್ಳುತ್ತದೆ. ರಕ್ತ ಸಂಬಂಧವನ್ನು ಹೊರತು ಪಡಿಸಿ ಬ್ಯಾರಿಗಳ ಕುಟುಂಬವು ಮದುವೆ ಸಂಬಂಧದ ಮೂಲಕ ವಿಸ್ತರಣೆಗೊಳ್ಳುತ್ತದೆ.15

ವಿವಾಹ ಇಸ್ಲಾಮಿನಲ್ಲಿ ಕಡ್ಡಾಯವಾಗಿದೆ. ಪೋಷಕರು ತಮ್ಮ ಮಗಳ ಮದುವೆಯ ಕುರಿತಾಗಿ ಮೊದಲೇ ಆಲೋಚನೆ ಮಾಡುತ್ತಾರೆ. ಕಾನೂನಾತ್ಮಕವಾದ ವಿವಾಹಕ್ಕೆ ಮಾತ್ರ ಇಸ್ಲಾಮ್ ಅನುಮತಿ ನೀಡಿದೆ. ವಿವಾಹ ಪೂರ್ವ ಲೈಂಗಿಕ ಅಥವಾ ಇನ್ನಾವುದೇ ಸಂಬಂಧವನ್ನು ಇಸ್ಲಾಂ ನಿಷೇಧಿಸಿದೆ. ಸಾಮಾನ್ಯವಾಗಿ ಎಲ್ಲಾ ಬ್ಯಾರಿಗಳು ಈ ಆದರ್ಶವನ್ನು ಅನುಸರಿಸುತ್ತಾರೆ. ಬ್ಯಾರಿಗಳು ಮದುವೆಯನ್ನು ಮಂಜಲವೆಂದು ಕರೆಯುತ್ತಾರೆ. ಮದುವೆಯ ಪ್ರಸ್ತಾವನೆಯನ್ನು ಹೆಣ್ಣಿನ ಪಾಲಕರು ಗಂಡಿನ ಕಡೆಯವರಿಗೆ ಕಳುಹಿಸುತ್ತಾರೆ. ಪರಸ್ಪರ ಮಾತುಕತೆಯ ಬಳಿಕ ಪೊದು (ಪ್ರಸ್ತಾಪ) ಅಂತಿಮಗೊಳಿಸುತ್ತಾರೆ. ತನಗೆ ಪ್ರಸ್ತಾಪ ಮಾಡಿರುವ ಹುಡುಗಿಯನ್ನು ನೋಡುವುದನ್ನು ಇಸ್ಲಾಂ ಅನುಮತಿಸಿದೆ. ಮದುವೆ ಪ್ರಸ್ತಾಪ ಮುಗಿದು ಔಪಚಾರಿಕೆಗಳ ಮುಕ್ತಾಯದ ಬಳಿಕ ಮದುವೆಯ ಪ್ರಥಮ ಹೆಜ್ಜೆ.16

ಮದುವೆಯ ಪ್ರಥಮ ಹೆಜ್ಜೆ ವರಪ್ಪು ಸಾಮಾನ್ಯವಾಗಿ ಹುಡುಗನ ಮನೆಯಲ್ಲಿ ನಡೆಯುತ್ತಿತ್ತು. ಪ್ರಮುಖ ಸಂಬಂಧಿಗಳು, ಗೆಳೆಯರು, ಮಸೀದಿಯ ಮೌಲ್ವಿಗಳು ಭಾಗವಹಿಸುತ್ತಾರೆ ಮತ್ತು ಮದುವೆಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಚರ್ಚೆ ನಡೆಸುತ್ತಾರೆ. ಚಿನ್ನ, ವರದಕ್ಷಿಣೆ, ಬಟ್ಟೆ-ಬರೆ, ಔತಣ, ಮದುವೆ ದಿನಾಂಕ ಮತ್ತು ಸಮಯ ಮುಂತಾದ ಪ್ರಮುಖ ವಿಷಯಗಳನ್ನು ಚರ್ಚಿಸಿ ಅಂತಿಮಗೊಳಿಸಲಾಗುತ್ತಿತ್ತು.

ಕೆಲವು ಕುಟುಂಬದವರು ವರದಕ್ಷಿಣೆ ಕುರಿತು ಮಾತುಕತೆ ನಡೆಸುತ್ತಾರೆ. ವರಪ್ಪು ನಡೆದ ಬಳಿಕ ಮುಂದೆ ನಡೆಯುವ ಎಲ್ಲ ಸಮಾರಂಭಗಳ ಸಂದರ್ಭದಲ್ಲಿ ಎರಡು ಕುಟುಂಬಗಳು ಪರಸ್ಪರ ಆಹ್ವಾನವನ್ನು ನೀಡುತ್ತಾರೆ. ಆದರೆ ಮದುವೆಗೆ ಮೊದಲು ಹೆಣ್ಣಿನ ಒಪ್ಪಿಗೆ ಇರಬೇಕೆಂದು ಇಸ್ಲಾಂ ಸ್ಪಷ್ಟ ಪಡಿಸುತ್ತದೆ. 17

ಬ್ಯಾರಿಗಳ ಮದುವೆಯನ್ನು ಒಂದು ಪ್ರಮುಖ ಧಾರ್ಮಿಕ ಆಚರಣೆಯಾಗಿ ಮತ್ತು ಅದು ಬದಲಾಯಿಸಲು ಸಾಧ್ಯವಿಲ್ಲದ ಕರಾರು ಎಂದು ನಂಬಿದ್ದರು. ಇದನ್ನು ನೆರವೇರಿಸುವುದನ್ನು ತಾಯಿಂತ್ (ನಿಖಾ) ಎಂದು ಕರೆಯುತ್ತಾರೆ. ನಿಖಾ ಒಂದು ಸರಳ ಪ್ರಕ್ರಿಯೆ. ಇಸ್ಲಾಂ ಸಂಪ್ರದಾಯ ಪ್ರಕಾರ ಮದುಮಗ ಮತ್ತು ಮದುಮಗಳ ತಂದೆ ಅಥವಾ ಆಕೆಯ ಪರವಾಗಿ ನಿಯೋಗಿಸಲಾದ ಅಧಿಕೃತ ವ್ಯಕ್ತಿ ಕುಳಿತುಕೊಳ್ಳುತ್ತಾರೆ. ಮಸೀದಿಯ ಧರ್ಮಗುರು(ಮೌಲ್ವಿ) ನಿಖಾವನ್ನು ಪಠಿಸಿಕೊಡುತ್ತಾರೆ. ಬ್ಯಾರಿಗಳು ಇಸ್ಲಾಮಿನ ಆದೇಶಗಳನ್ನು ಪಾಲಿಸುತ್ತಿದ್ದು ಸಂಪ್ರದಾಯಗಳನ್ನು ಅನುಸರಿಸುತ್ತಾರೆ. ಬ್ಯಾರಿಗಳ ಮದುವೆಯನ್ನು ಅದ್ದೂರಿಯಾಗಿ ಆಚರಿಸಲಾಗುತ್ತಿತ್ತು. ಜಮಾಹತ್‌ನ (ಮಸೀದಿ) ಅನುಮತಿ ಪಡೆದುಕೊಳ್ಳುವುದು ಮತ್ತು ಮದುವೆಯ ದಿನ, ಸಮಯದ ಬಗ್ಗೆ ಜಮಾಹತ್‌ಗೆ ಮಾಹಿತಿ ನೀಡುವುದು ಹಾಗೂ ಮದುವೆಯ ನಿಗದಿತ ದಿನಾಂಕದ ಒಂದು ಶುಕ್ರವಾರ ಎರಡೂ ಕಡೆಯವರು ಜಮಾಹತ್‌ಗೆ ಹೇಳಿಕೆ ನೀಡುವುದರಿಂದ ಅದೇ ದಿನದಲ್ಲಿ ಆ ಜಮಾಹತ್‌ನಲ್ಲಿ ಬೇರೆ ಮದುವೆ ನಡೆಯುವುದನ್ನು ತಡೆಯುವ ವ್ಯವಸ್ಥೆ ಇದಾಗಿದೆ. ಸಾಮಾನ್ಯವಾಗಿ ನಿಖಾಹ್ ಹುಡುಗಿಯ ಮನೆಯಲ್ಲಿ ನಡೆಸಲಾಗುತ್ತದೆ. ಮದುವೆಯ ದಿನದ ರಾತ್ರಿ ಮದುಮಗ ಮದುಮಗಳ ಮನೆಗೆ ತೆರಳುವ ಸಂಪ್ರದಾಯವಿದೆ. ಮದುಮಗಳನ್ನು ಮೆರವಣಿಗೆಯಲ್ಲೆ ಕರೆದುಕೊಂಡು ಹೋಗುವ ಸಂದರ್ಭದಲ್ಲಿ ಹಾಡು, ಸಂಗೀತ ಕೇಳುತ್ತದೆ. ಮದುಮಗ ಮದುಮಗಳ ಮನೆ ತಲುಪಿದ ಕೂಡಲೇ ಸಂಗೀತ, ಪಟಾಕಿಗಳನ್ನು ಸಿಡಿಸುತ್ತಾರೆ. 18

ಮದುಮಗಳ ಮನೆಯಲ್ಲಿ ಮದುವೆಯ ಮಹಾ ಸಂಭ್ರಮಕ್ಕೆ ಅಣಿಯಾಗುತ್ತಿತ್ತು. ಮದುವೆಯ ಹಿಂದಿನ ರಾತ್ರಿ ಮೈಲಾಂಜಿ (ಮೆಹಂದಿ) ಸಮಾರಂಭ ಇರುತ್ತಿತ್ತು. ಮಸೀದಿಯ ಧರ್ಮಗುರುಗಳು ಧಾರ್ಮಿಕ ಕಾರ್ಯವನ್ನು ಮೌಲೀದ್ ಪಾರಾಯಣ ಆರಂಭಿಸಿದ ನಂತರ ಮೈಲಾಂಜಿ(ಮೆಹಂದಿ) ಕಾರ್ಯಕ್ರಮ ಮುಂದುವರಿಯುತ್ತದೆ. ಬಳಿಕ ವಿಶೇಷ ಆಹಾರವನ್ನು ಬಡಿಸುತ್ತಾರೆ. ಮಹಿಳೆಯರು ಮದುಮಗಳನ್ನು ಸ್ನಾನ ಮಾಡಿಸಿ ಮೈಲಾಂಜಿ ಪಾಟು ಹಾಡಿ ಆಕೆಯ ಕೈ ಮೇಲೆ ಮೈಲಾಂಜಿ ಇಡುತ್ತಿದ್ದರು. ಅದೊಂದು ವಿಶೇಷ ಉತ್ಸವದ ದಿನವಾಗುತ್ತದೆ.

ಮದುವೆಯ ದಿನ ಮದುಮಗನ ಕೋಣೆಯನ್ನು ವಿಶೇಷವಾಗಿ ಸಜ್ಜುಗೊಳಿಸುವುದು ಮುಖ್ಯವಾಗಿರುತ್ತೆ. ಸುಗಂಧ ಹಾಗೂ ಹೂವುಗಳಿಂದ ಅಲಂಕರಿಸಲಾಗುತ್ತಿತ್ತು. ಹಾಸಿಗೆ, ಬಟ್ಟೆ ಬರೆ ಕೋಣೆಯ ಗೋಡೆಯನ್ನು ಆಕರ್ಷಣೀಯವಾಗುವಂತೆ ಸಿದ್ದಪಡಿಸಲಾಗುತ್ತದೆ. ಒಂದು ಲ್ಯಾಂಪ್‌ನ್ನು ಕೋಣೆಯಲ್ಲಿ ಇರಿಸುತ್ತಾರೆ. ಮದುಮಗನ ಆಗಮನವಾದಗ ಒಂದು ಲ್ಯಾಂಪ್ ಇರುವುದು ಬ್ಯಾರಿಗಳ ಸಂಪ್ರದಾಯವಾಗಿದೆ.19

ಮದುಮಗ ಮನೆಗೆ ಪ್ರವೇಶಿಸುವಾಗ ಮದುಮಗಳ ಸಹೋದರ ಒಬ್ಬ ಹುಡುಗ ಹಾಲು ತುಂಬಿದ ಗಿಂಡಿ(ಪಾತ್ರ) ಹಿಡಿದು ಸ್ವಾಗತಿಸಿ ಸ್ವಲ್ಪ ಹಾಲನ್ನು ಮಧುಮಗನ ಬಲಗಾಲಿಗೆ ಸುರಿಸಲಾಗುತ್ತದೆ. ಮದುಮಗ ಉಡುಗೊರೆಯಾಗಿ ಚಿನ್ನದ ಆಭರಣವನ್ನು ಗಿಂಡಿಯ ಒಳಗೆ ಹಾಕುತ್ತಿದ್ದ ಇದು ಮದುಮಗಳಿಗೆ ಪ್ರಥಮ ಉಡುಗೊರೆ. ಮದುಮಗ ಕೋಣೆಯನ್ನು ಪ್ರವೇಶಿಸಿದ ಬಳಿಕ ಆತನನ್ನು ಹಾಸಿಗೆಯ ಮೇಲೆ ಕುಳ್ಳಿರಿಸಲಾಗುತ್ತೆ. ನಂತರ ಕೆಲವು ಗಂಟೆಗಳವರೆಗೆ ಹಾಡುವ ಕಾರ್ಯಕ್ರಮ ನಡೆಯುತ್ತದೆ. ಬಳಿಕ ಡಿನ್ನರ್ ಆರಂಭವಾಗುತ್ತದೆ. ನಂತರ ಅಲ್ಲಿಗೆ ಮದುವೆಯ ದಿನದ ಪ್ರಮುಖ ಭಾಗ ಮುಕ್ತಾಯವಾಗುತ್ತದೆ. ಈ ರೀತಿಯಾಗಿ ಬ್ಯಾರಿಗಳು ಸರಳ ವಿವಾಹಕ್ಕೆ ಒತ್ತು ನೀಡಿದ್ದರು, ಮದುವೆ ಮಾತ್ರ ಅದ್ದೂರಿಯಾಗಿ ನಡೆಯುತ್ತದೆ. ಪ್ರಾಚೀನ ಬ್ಯಾರಿಗಳ ಮದುವೆ ಕನಿಷ್ಟ 15 ದಿನಗಳವರೆಗೂ ನಡೆಯುತ್ತಿತ್ತು. ಬ್ಯಾರಿಗಳ ಮದುವೆ ಪದ್ದತಿ ವಿಶಿಷ್ಟವಾಗಿದ್ದು ಕೆಲವು ಕಟ್ಟುಪಾಡುಗಳು ತುಳು ಜನರ ಪ್ರಭಾವವು ಒಳಗೊಂಡಿದೆ. ಬ್ಯಾರಿಗಳು ಮದುವೆಯ ಸಂಪೂರ್ಣ ಜವಾಬ್ದಾರಿಯನ್ನು ಕುಟುಂಬದ ಹಿರಿಯ ವ್ಯಕ್ತಿಗೆ ನೀಡುತ್ತಾರೆ. ಇವರನ್ನು ಲೇಸ್‌ಕಾರ ಎನ್ನುತ್ತಾರೆ. ಈ ಹಿರಿಯ ಸದಸ್ಯನ ಸಲಹೆ ಸೂಚನೆಗಳ ಮೂಲಕ ಕುಟುಂಬದ ಇತರ ಎಲ್ಲಾ ಸದಸ್ಯರು ಮದುವೆ ಕೆಲಸ ಕಾರ್ಯಗಳ ಜವಾಬ್ದಾರಿ ಹಂಚಿಕೊಳ್ಳುತ್ತಾರೆ. 20

ಹಿಂದಿನ ಕಾಲಕ್ಕೆ ಹೋಲಿಕೆ ಮಾಡಿದರೆ ಈಗಿನ ಬ್ಯಾರಿಗಳ ಮದುವೆ ಭಿನ್ನವಾಗಿದೆ. ಈಗ ಹಗಲು ಹೊತ್ತಿನಲ್ಲಿ ಹಾಲ್ ಅಥವಾ ಸಭಾಂಗಣದಲ್ಲಿ ಮದುವೆ ನಡೆಯುತ್ತದೆ. ಮಳೆಗಾಲ, ಬೇಸಿಗೆಕಾಲ, ಚಳಿಗಾಲ ಎನ್ನದೆ (ಪವಿತ್ರ ರಂಝಾನ್ ಉಪವಾಸ) ತಿಂಗಳು ಹೊರತು ಪಡಿಸಿ ಬ್ಯಾರಿಗಳ ಮದುವೆ ನಡೆಯುತ್ತಿತ್ತು. ೩-೪ ದಿನಗಳ ಮುಂಚೆಯೇ ಹತ್ತಿರದ ಬಂಧುಗಳು ಮದುವೆಗೆ ಬರುತ್ತಾರೆ. ಕಂಗು, ಕಂಗಿನ ಸಲಾಕೆ, ಬಿದಿರು ಕಟ್ಟಿ ಅದರ ಮೇಲೆ ತೆಂಗಿನ ಗರಿಗಳನ್ನು ಹಾಕುತ್ತಾರೆ. ಮದುವೆಗೆ ತಂದ ಆಹಾರ ಸಾಮಾಗ್ರಿಗಳ ಕಟ್ಟುಗಳನ್ನು ಬಿಡಿಸಿ, ಮೆಣಸಿನ ತೊಟ್ಟು ತೆಗೆಯುವುದು, ಅಕ್ಕಿಯ ಕಲ್ಲು ಹೆಕ್ಕುವುದು, ಕಡೆಯುವ ಕಲ್ಲಿನ ಸಾಮಾಗ್ರಿಗಳನ್ನು ಕುಟ್ಟುವುದು, ಅರೆಯುವುದು, ಕೆಲಸ ಕಾರ್ಯಗಳು ಭರದಿಂದ ಸಾಗುತ್ತದೆ.21

ಮಗು ಹುಟ್ಟಿದ ಹದಿನೈದು ಅಥವಾ ಮೂವತ್ತನೆ ದಿನದಿಂದ ಹೆಣ್ಣು-ಗಂಡು ಭೇದವಿಲ್ಲದೆ ಕಜಂಬು (ತಲೆಕ್ಷೌರ) ಮಾಡಿಸುತ್ತಾರೆ. ಇದನ್ನು ಕಜಂಬು (ಕೊಜಂಬು) ತೆಗೆಯುವುದು ಎನ್ನುತ್ತಾರೆ. ಆ ದಿನ ಗಂಡಿನ ಕಡೆಯಿಂದ ಸ್ತ್ರೀಯರು ಬಂದು ತಾಯಿ ಮತ್ತು ಮಗುವಿಗೆ ಬಟ್ಟೆ ಬರೆ, ಕಾಲು ಚೈನು, ನಡು ಚೈನು, ಉಂಗುರ ಇತ್ಯಾದಿ ಆಭರಣ ತಂದು ತೊಡಿಸುತ್ತಾರೆ. ನಂತರ ಕಜಂಬು ಮಾಡಿದ ಮಗುವಿನ ತಲೆಕೂದಲನ್ನು ತೋಡು, ನದಿ, ಸಮುದ್ರಗಳಿಗೆ ಬಿಡುತ್ತಾರೆ. ಹಾಗೂ ಕೂದಲನ್ನು ತೂಗಿ ನೋಡಿ, ಅಷ್ಟು ಗ್ರಾಂಗೆ ತಕ್ಕಂತೆ ಚಿನ್ನವನ್ನು ಮಸೀದಿ ಅಥವಾ ದರ್ಗಕ್ಕೆ ನಿಡುತ್ತಾರೆ. ಬಾಲ್ ಅಥವಾ ಚಾಕುವಿನಿಂದ ಕಜಂಬು ತೆಗೆಯಲಾಗುತ್ತಿತ್ತು. ಆದರೆ ಇಂದು ಬ್ಲೇಡ್‌ನ ಸಹಾಯದಿಂದ ತೆಗೆಯಲಾಗುತ್ತದೆ. ದಿನವಿಡೀ ತ್ಯಾಇರೆ ಚಲ್ಲಿ (ಸಕ್ಕರೆ ಬೆರೆಸಿದ ತೆಂಗಿನ ತುರಿ) ಕಲ್ಕ್‌ಂಡಿ (ಕಲ್ಲು ಸಕ್ಕರೆ) ಮಿಠಾಯಿ ಕಡ್ಲೆಯನ್ನು ನೆರೆಕರೆಯ ಮತ್ತು ಹತ್ತಿರದ ಸಂಬಂಧಿಕರಿಗೆ ಕರೆ ನೀಡಿ ವಿಶೇಷ ಭೋಜನವನ್ನು ನೀಡುತ್ತಾರೆ.22

ಮಗುವಿಗೆ ಜನ್ಮವಿತ್ತ ಮಗುವಿನ ತಾಯಿ ತನ್ನ ನಲ್ವತ್ತನೇ ದಿನದಲ್ಲಿ ತನ್ನ ಪತಿಯ ಮನೆಗೆ ಮಗುವಿನ ಜೊತೆಗೂಡಿ ಹೋಗಿ ಒಂದೆರಡು ದಿನ ಇದ್ದು ಬರುವುದು ಸಂಪ್ರದಾಯ. ಆ ದಿನದ ಸ್ನಾನವನ್ನು ಬ್ಯಾರಿಗಳು (ನಲ್ವತ್ತು ದಿನದ ಸ್ನಾನ) ನಾಪೊವುಡೆ ಕುಲಿ ಮಾಡಿ ಏಳುವುದು ಎನ್ನುತ್ತಾರೆ. ಇದನ್ನು ಅತ್ಯಂತ ಸಂಭ್ರಮದಿಂದ ಆಚರಿಸುತ್ತಾರೆ. ಈ ವೇಳೆ ಮಗುವಿನ ತಂದೆ ತನ್ನ ಪತ್ನಿಗೆ ಹೊಸ ಬಟ್ಟೆ ಬರೆಯನ್ನು ಉಡುಗೊರೆಯಾಗಿ ನೀಡುತ್ತಾನೆ. ಆದರೆ ಇದು ಹೆಣ್ಣಿನ ಮನೆಯಲ್ಲಿ ನಡೆಯುವ ಕಾರ್ಯಕ್ರಮವಾಗಿತ್ತು. ಆ ದಿನ ಆ ಮನೆಯಲ್ಲಿ ಸ್ತ್ರೀಯರು ಅಧಿಕ ಸಂಖ್ಯೆಯಲ್ಲಿರುತ್ತಾರೆ. ವಿಶೇಷ ಭೋಜನವನ್ನು ತಯಾರು ಮಾಡಲಾಗುತ್ತದೆ. ಬಳಿಕ ಮಗುವಿನ ತಂದೆ ತನ್ನ ಪತ್ನಿಯೊಂದಿಗೆ ಇಬ್ಬರನ್ನು ಮನೆಗೆ ಕರೆದುಕೊಂಡು ಹೋಗುತ್ತಾನೆ. ಈ ನಲ್ವತ್ತು ದಿನಗಳ ಕಾಲ ತಾಯಿ ಮತ್ತು ಮಗುವನ್ನು ಉಪಚರಿಸುವವಳನ್ನು ಸೂಲಗಿತ್ತಿ ಎನ್ನುತ್ತಾರೆ. ಬ್ಯಾರಿಗಳು ಇದನ್ನು 'ಪೇತ್ ನೋಕುರೇ' ಎನ್ನುತ್ತಾರೆ. ಈ ದಿನ ಸೂಲಗಿತ್ತಿಗೆ ಹಣ, ಆಹಾರ, ಸಾಮಾಗ್ರಿ, ಕುಪ್ಪಾಯ, ರುಮಾಲ್ ಇತ್ಯಾದಿಗಳನ್ನು ಕೊಟ್ಟು ಸನ್ಮಾನಿಸಲಾಗುತ್ತೆ. 23

ಹೆಣ್ಣು ಮಗುವಿಗೆ ಆರೇಳು, ತಿಂಗಳು ಅಥವಾ ಒಂದೆರಡು ವರ್ಷ ಪ್ರಾಯವಾದಾಗ ಮೊದಲ ಬಾರಿಗೆ ಕಿವಿ ಚುಚ್ಚಲಾಗುತ್ತದೆ. ಇದನ್ನು ತುಳುನಾಡಿನ ಆಚಾರಿ ಎನ್ನುತ್ತಾರೆ. ಇವರನ್ನು ಕಾದ್ ಕುತ್ತುರೇ ಆಚಾರಿ ಎನ್ನುತ್ತಾರೆ. ಆ ದಿನ ವಿಶೇಷ ಸಂಭ್ರಮವಿರುತ್ತದೆ. ಇದನ್ನು ಕಾದ್ ಕುತ್ತುರೆ ಮಙಲ ಎನ್ನುತ್ತಾರೆ. ಕಿವಿಗೆ ಬ್ಯಾರಿಗಳು ಕಾದ್ ಎನ್ನುತ್ತಾರೆ. ಹೆಣ್ಣು ಮಗುವಿನ ಕಿವಿಯ ಮೇಲ್ಭಾಗದಲ್ಲಿ ಕೇವಲ ಟಿಕ್ಕಿಗೆ ತಕ್ಕಷ್ಟು ಸಣ್ಣ ಐದಾರು ರಂಧ್ರಗಳನ್ನು ಮಾಡಿ ಚಿನ್ನ ಅಥವಾ ಬೆಳ್ಳಿಯ ಸರಿಗೆಯನ್ನು ಹಾಕಲಾಗುತ್ತದೆ. ಮುಂದೆ ಹೆಣ್ಣು ಪ್ರೌಢಾವಸ್ಥೆಗೆ ತಲುಪಿದಾಗ ಸರಿಗೆಯನ್ನು ತೆಗೆದು ಪವಿತ್ರ ಎಂದು ಬರೆಯಲಾಗಿರುವ ಅಲಿಖಾತುವೆಂಬ ವಿಸೇಷ ಆಭರಣವನ್ನು ತೊಡಲಾಗುತ್ತದೆ. ಬ್ಯಾರಿ ಮಹಿಳೆಯರು ಆಭರಣ ಪ್ರಿಯರು, ಮೊದಲ ಬಾರಿಗೆ ಚಿನ್ನಾಭರಣ ತೊಡುವ ಕಾರಣ ಆ ದಿನದಲ್ಲಿ ಹಾಡುವುದು, ಕುಣಿಯುವುದು, ಹೊಟ್ಟೆ ತುಂಬಾ ತಿಂದು ಸಂತೋಷ ಪಡುವುದು ಸಾಮಾನ್ಯ.24

ಎಳೆಯ ಹೆಣ್ಣು ಮಕ್ಕಳಿಗೆ ಕಿವಿಯನ್ನು ಚುಚ್ಚುವ ಕಾರ್ಯಕ್ರಮವಿದ್ದರೆ ಎಳೆಯ ಗಂಡು ಮಕ್ಕಳಿಗೆ ಮುಂಜಿ ಮದುವೆ (ಸುನ್ನತ್ ಮಙ್ಗಲ) ಮಾಡಲಾಗುತ್ತದೆ. ಇದು ಇಸ್ಲಾಮಿನ ಕರ್ಮಶಾಸ್ತ್ರವು ಹೌದು. ಬಡವ–ಶ್ರೀಮಂತ ಎಂಬ ಭೇದವಿಲ್ಲದೆ ಎಲ್ಲ ಗಂಡು ಮಕ್ಕಳಿಗೂ ಸನ್ನತ್ (ಮುಂಜಿ) ಮಾಡುವುದು ಕಡ್ಡಾಯ ಇದಕ್ಕೆ ಸಾಮಾನ್ಯವಾಗಿ ಗಂಡು ಮಕ್ಕಳಿಗೆ 7 ವರ್ಷಪ್ರಾಯ ತುಂಬಿದಾಗ ವತ್ಸ (ಮುಸ್ಲಿಂ ಕ್ಷೌರಿಕ) ಶಿಶ್ನದ ಮುಂದೋಗಲನ್ನು ಕತ್ತರಿಸಲಾಗುತ್ತದೆ. ಆ ಸಂದರ್ಭದಲ್ಲಿ ವತ್ಸ (ಮುಸ್ಲಿಂ ಕ್ಷೌರಿಕ) ಅಲ್ಲಾಹು ಅಕ್ಬರ್ ಎನ್ನುತ್ತಾ ಮುಂಜಿ ಮಾಡುತ್ತಾನೆ. ನಂತರ ಆ ಹುಣ್ಣಿಗೆ ಬ್ಯಾಂಡೇಜ್ ಕಟ್ಟುತ್ತಾರೆ. ಸುನ್ನತ್ (ಮುಂಜಿ) ಒಳಗಾದ ಹುಡುಗನ ಹುಣ್ಣಿಗೆ ಗಡುಸಾದ ಬಟ್ಟೆ ಬರೆ ತಾಗದಂತೆ ತೆಳುವಾದ ಬಿಳಿ ವಸ್ತ್ರವನ್ನು ಸೊಂಟಕ್ಕೆ ಸುತ್ತಿ ಕಟ್ಟುತ್ತಾರೆ.

ಮೂರ್ನಾಲ್ಕು ದಿನ ಆತ ಚಾಪೆಯಲ್ಲೇ ಮಲಗಿರುತ್ತಾನೆ. ಆತನನ್ನು ನೋಡಲು ನೆರೆಕರೆಯವರು, ಸಂಬಂಧಿಕರು ಬರುವವರು ರೊಟ್ಟಿ, ಮಾಂಸದ ಪದಾರ್ಥಗಳನ್ನು ತರುವುದುಂಟು. ಮರಳ ಹೋಗುವಾಗ ಕೈ ಕವರ್ ಕಾಣಿಕೆಯನ್ನು ನೀಡುತ್ತಾರೆ. ಸುನ್ನತ್‌ಗೆ ಒಳಗಾದ ಹುಡುನ ಹುಣ್ಣನ್ನು ಮೂರು, ಐದು, ಏಳು, ಒಂಭತ್ತು ಹೀಗೆ ಬೆಸ ಸಂಖ್ಯೆಯಲ್ಲಿ ಅದು ಒಣಗುವ ತನಕ ಶುಚಿಗೊಳಿಸಲಾಗುತ್ತದೆ. ಮುಂಜಿಯ ಮದುಮಗನ ಆರೋಗ್ಯದ ಹಿತದೃಷ್ಟಿಯಿಂದ ಬಿಸಿನೀರು, ಕಪ್ಪು ಕಡ್ಲೆಯ ಪದಾರ್ಥ, ರೊಟ್ಟಿ, ನಾಟಿ ಕೋಳಿ ಸಾರು ನೀಡುತ್ತಾರೆ. ಮೂರನೆ ದಿನದಂದು ಮೊದಲ ಬಾರಿಗೆ ಶುಚಿಗೊಳಿಸುವ ಕಾರಣ ವಿಶೇಷ ಔತಣ ಏರ್ಪಡಿಸಲಾಗುತ್ತದೆ. ಮುಂಜಿಗೊಳಗಾದ ಹುಡುಗನ ಹುಣ್ಣು ಒಣಗಿದ ಬಳಿಕ ಸಾಮಾನ್ಯವಾಗಿ ಶುಕ್ರವಾರ ದಿನದಂದು ಮಸೀದಿಗೆ ಕರೆದುಕೊಂಡು ಹೋಗುತ್ತಾರೆ. ಇದನ್ನು ಸುನ್ನತ್ ಪುದಿಯಾಂಪುಲೆ ಪಳ್ಳಿಗ್ ಪೊಂಡೆ ಎನ್ನುತ್ತಾರೆ. ಹೀಗೆ ಹೋಗುವಾಗ ಆತನ ಗೆಳೆಯರು ಕುಟುಂಬದ ಹಿರಿಯರು ಜೊತೆಗೂಡುತ್ತಾರೆ. ಮುಂಜಿಗೆ ಒಳಗಾದ ಹುಡುಗನನ್ನು ಮದುಮಗನಂತೆ ಸಿಂಗರಿಸಿ ಹೊಸ ಬಟ್ಟೆ–ಬರೆಗಳನ್ನು ಹಾಕಿ ಮೆರವಣಿಗೆಯಲ್ಲಿ ಮಸೀದಿಗೆ ಕರೆತಂದು ಮಸೀದಿಯ ಪ್ರಾರ್ಥನೆಯ ಬಳಿಕ ಅದೇ ರೀತಿ ಮನೆಗೆ ಹಿಂದಿರುಗಿ ಕರೆ ತರುತ್ತಾರೆ. ಮರಳ ಬಂದು ಎಲ್ಲರೂ ಸೇರಿ ವಿಶೇಷ ಔತಣಕೂಟದಲ್ಲಿ ಭಾಗವಹಿಸುತ್ತಾರೆ. ಈಗ ಈ ಮುಂಜಿಯ ಕಾರ್ಯವನ್ನು ವೈದ್ಯರುಗಳು ಮಾಡುತ್ತಿದ್ದು ಕೆಲವರು ಮಗು ಹುಟ್ಟಿದ ಕೆಲ ದಿನಗಳ ನಂತರ ಮಾಡಿಸುತ್ತಾರೆ.25

ಬ್ಯಾರಿಗಳು ಬಹುತೇಕ ಸರಳ ಉಡುಪುಗಳನ್ನು ಧರಿಸುತ್ತಿದ್ದರು. ಒಂದು (ಮುಂಡು) ಲುಂಗಿ) ಅಥವಾ ಸಾದಾ ಉಡುಪನ್ನು ಧರಿಸುತ್ತಾರೆ. ಮಾತ್ರವಲ್ಲದೆ ವಯಸ್ಕರು ಸಹ ಲುಂಗಿ ಧರಿಸುವುದು ಸಾಮಾನ್ಯವಾಗಿದೆ. ಬ್ಯಾರಿಗಳ ಶರ್ಟನ್ನು ಧರಿಸುತ್ತಾರೆ.26

ಬ್ಯಾರಿ ಸ್ತ್ರೀಯರು ಆಭರಣ ಪ್ರಿಯರಾಗಿದ್ದು ಇವರು ಮೈ ತುಂಬಾ ಆಭರಣ ತೊಡುತ್ತಾರೆ. ಬ್ಯಾರಿ ಮಹಿಳೆಯರು ತೊಡುವ ಆಭರಣಗಳು ಇತರ ಜನಾಂಗೀಯ ಮಹಿಳೆಯರಿಗಿಂತ ತೀರ ಭಿನ್ನವಾದ ಆಭರಣಗಳನ್ನು ತೊಡುತ್ತಿದ್ದು ಮದುವೆ, ಮುಂಜಿ, ಮುಂತಾದ ಸಭೆ ಸಮಾರಂಭಗಳಿಗೆ ಹೋಗುವ ಸಂದರ್ಭದಲ್ಲಿ ಮೈ ತುಂಬಾ ಆಭರಣ ಧರಿಸುತ್ತಾರೆ. ಕೆಲವರು ಚಿನ್ನ, ಬೆಳ್ಳಿಯ ಆಭರಣ ಧರಿಸುತ್ತಾರೆ. ಬ್ಯಾರಿ ಸ್ತ್ರೀಯರು ಕಿವಿಯ ಆಭರಣವಾಗಿ ಅಲಿಖಾತು, ಲೋಲಕ್, ಬೆಂಡೆಲೋಲಕ್, ಕೊಪ್ಪು, ಸರಪೊಳಿ, ಬಾಲ್ಕಿ, ಜೋಲಾರ್, ಅರೋಲಿ, ಸರಪೋಲಿ, ಕರಾಂಪು, ಬಾಲ್ಸರ, ಅಲಿಖಾತ್, ಚಾವಡ, ಕುಡ್ಕ, ಟಿಕ್ಕಿ, ಕಾಯಿಲ, ಕೊಂಬನ್ನಜ್ಞ ಪರಪಲೆ, ಒಲಿ, ವಾಲೆ, ಕಾಯಿಲಂ ಮುಂತಾದ ಆಭರಣಗಳನ್ನು ಧರಿಸುತ್ತಾರೆ. ಕಾಲಿನ (ಬೆಳ್ಳಿ ಮತ್ತು ಚಿನ್ನ) ಕಾಲ್ ಕುಣಿಪು, ಕಾಲ್ ಕಡಗ, ಕಾಲ್ ಪಾಡಗ, ಕಾಲ್ ಪಾಡಗ, ಕಾಲ್ ಸರಪಲಿ, ಕಾಲ್ ಚೈನ್, ಕಾಲ್ ಬಲೆ ಧರಿಸುತ್ತಾರೆ. ಕೈಗಳ ಮುಖ್ಯ ಆಭರಣಗಳು ಬಳೆ, ಎಳಬಳೆ, ಸುರ್ಗಿವರಿ, ಮರ್ಣಿಪಿರಿ, ಎಡಬಳೆ, ತಟ್ಟುಬಳೆ, ಕಾದುಬಳೆ, ಕುತ್ತಿಗೆಗೆ ಧರಿಸುವ ಪ್ರಮುಖ ಆಭರಣಗಳು, ತಾಳಿಮಾಲೆ, ಗೆಜ್ಜೆಟಿಕ್, ಚಾವಡ, ಉರುಕುಪೀಸ್, ಮಿಸ್ಟಿಮಾಲೆ, ಬಟ್ಟೆಸುರೂಪ್ ಪೂಮಾಲೆ, ನಡುಪಟ್ಟಿ, ಕಾಲ್ ಪಟ್ಟಿ ಅರಪಟ್ಟಿ, ಅರಂಞಾನ, ನೂಲು ಇತ್ಯಾದಿ ಮುಖ್ಯ ಆಭರಣಗಳನ್ನು ಬ್ಯಾರಿ ಮಹಿಳೆಯರು ಧರಿಸುತ್ತಾರೆ.27

ಬ್ಯಾರಿಗಳು ಅತಿಥಿ ಸತ್ಕಾರದಲ್ಲಿ ಅತ್ಯಂತ ಮುಂದು ತಮ್ಮ ಮನೆಗೆ ಬಂದ ಅತಿಥಿಗಳನ್ನು ಆದರವಾಗಿ ಎದುರುಗೊಂಡು ಉಪಚರಿಸಿ ಅವರಿಗೆ ಬೇಕಾದ ಎಲ್ಲ ಸೌಲಭ್ಯಗಳನ್ನು ಒದಗಿಸಿ ಅವರು ಹಿಂದಿರುಗಿ ಹೋಗುವವರೆಗೆ ಅವರನ್ನು ಆದರದಿಂದ ಬೀಳ್ಕೊಟ್ಟು ತಮ್ಮ ಬಂಧುಗಳು, ನೆರೆಹೊರೆಯವರು ಪರಿಚಯಸ್ಥರಿಗೆ (ಅಸಲಾಂ ಅಲೈಕುಂ) ಎಂದು ಹೇಳಿ ಕಳುಹಿಸುತ್ತಾರೆ. 28

ತುಳುನಾಡು ಜಿಲ್ಲೆಯ ಬ್ಯಾರಿಗಳು ಮತ್ತು ಆರಂಭ ಕಾಲದ ಮುಸ್ಲಿಮರು ಇಸ್ಲಾಮಿನ ಮೂಲಭೂತ ವಿಚಾರಗಳೊಂದಿಗೆ ಸ್ಥಳೀಯ ಸಂಪ್ರದಾಯಗಳು ಮತ್ತು ಪದ್ಧತಿಯನ್ನು ಅನುಸರಿಸುತ್ತಿದ್ದರು. ಮುಸ್ಲಿಮರು ಕಲಿಮಾ ಎಂಬ ಇಸ್ಲಾಮಿನ ಅತ್ಯಂತ ಮುಖ್ಯ ಕಲ್ಪನೆಗೆ ಬದ್ಧರಾಗಿದ್ದರು. ಇದು ಮುಖ್ಯವಾಗಿ ತೌಹಿದ್ ಅಥವಾ ಏಕತೆ ದೇವತ್ವ ಎಂಬ ಕಲ್ಪನೆಯಾಗಿತ್ತು. ಈ ಕರಾವಳಿಯಲ್ಲಿ ಇಸ್ಲಾಂ ಧರ್ಮವನ್ನು ಪ್ರಸಾರ ಮಾಡಿ ನೆಲೆಗೊಳಿಸಿದ ಕೀರ್ತಿ ಅರಬರಿಗೆ ಸಲ್ಲುತ್ತದೆ. ಈ ರೀತಿ ಹೊಸ ಧರ್ಮವನ್ನು ಸ್ವೀಕರಿಸಿದ ನಂತರವೂ ಅವರ ಹಳೆಯ ಪದ್ಧತಿ ಮತ್ತು ಸಂಪ್ರದಾಯಗಳು ಭದ್ರವಾಗಿದ್ದು ಇದಕ್ಕೆ ಮುಖ್ಯ ಉದಾಹರಣೆ ಈ ಜನ ತಾವು ತೆರಳುವ ಪ್ರಾರ್ಥನ ಮಂದಿರಕ್ಕೆ ಮತ್ತು ದರ್ಗಕ್ಕೆ ಹರಕೆ (ನೇರ್ಚೆ) ನೀಡುತ್ತಿರುವುದು. ದರ್ಗಗಳು ಮಸೀದಿಯ ಆಡಳಿತಕ್ಕೆ ಒಳಪಟ್ಟಿವೆ.

ಪ್ರತಿಯೊಂದು ಮಸೀದಿಯಲ್ಲಿ ಒಂದು ಹಣದ ಡಬ್ಬಿಯನ್ನು ಹರಕೆಗಾಗಿ (ನೇರ್ಚೆ) ಇಡುತ್ತಿದ್ದರು. ತುಳುನಾಡಿನಲ್ಲಿ ಇಂದಿಗೂ ದೇವಸ್ಥಾನ ಮತ್ತು ಮಸೀದಿಗಳಲ್ಲಿ ಹರಕೆ ಡಬ್ಬಿಗಳು ಅತ್ಯಂತ ಸಾಮಾನ್ಯವಾಗಿದೆ. ಮಸೀದಿಗಳಲ್ಲಿ ದೀಪ ಉರಿಸಲು ಎಣ್ಣೆಯನ್ನು ಕಾಣಿಕೆಯಾಗಿ ನೀಡುವುದು, ಅಗರಬತ್ತಿ, ಲೋಭನಗಳನ್ನು ನೀಡುವುದು ಮಾಮೂಲಾಗಿದೆ. ಈ ರೀತಿಯ ಸಂಪ್ರದಾಯಗಳ ಮೂಲ ಸ್ಥಳೀಯ ಕಟ್ಟಲೆಗಳಂದ ಪ್ರಭಾವ ಹೊಂದಿದೆ. ಸಲಾತ್ ಅಥವಾ ಪ್ರಾರ್ಥನೆ ಎಂಬುವುದು ಇನ್ನೊಂದು ಮುಖ್ಯ ಸಂಪ್ರದಾಯ. ಇದನ್ನು ಬ್ಯಾರಿಗಳು ನಿಸ್ಕಾರ ಎಂದು ಕರೆಯುತ್ತಾರೆ. ಇದು ಕಡ್ಡಾಯ ಸಂಪ್ರದಾಯವಾಗಿದ್ದು, ಪರಿಪೂರ್ಣವಾಗಿ ನಿರ್ವಹಿಸಬೇಕಾದರೆ ಹಲವು ಷರತ್ತುಗಳಿವೆ. ಇದರ ಕುರಿತಾಗಿ ಮದರಸ ವಿದ್ಯಾಭ್ಯಾಸದಲ್ಲಿ ಮುಸ್ಲಿಂ ಧರ್ಮಗುರುಗಳು ಬೋಧಿಸುತ್ತಾರೆ. ದಿನದ ಐದು ಬಾರಿ ನಮಾಜ್ ಎಲ್ಲಾ ಬ್ಯಾರಿಗಳು ಮತ್ತು ಬ್ಯಾರಿ ಮಹಿಳೆಯರಿಗೂ ಕಡ್ಡಾಯವಾಗಿದೆ. ಬ್ಯಾರಿ ಗಂಡಸರು ವಾರದಲ್ಲಿ ಒಂದು ದಿನ ಶುಕ್ರವಾರದಂದು ಮಧ್ಯಾಹ್ನ ವಿಶೇಷ (ಜುಮಾ) ನಮಾಜನ್ನು ನಿರ್ವಹಿಸುತ್ತಾರೆ. 29

ಬ್ಯಾರಿ ಮಹಿಳೆಯರಿಗೆ ನಮಾಜ್ ನಿರ್ವಹಣೆ ಮಸೀದಿಯಲ್ಲಿ ಕಡ್ಡಾಯವಿಲ್ಲ. ಇಸ್ಲಾಂ ಕ್ಯಾಲೆಂಡರ್ ಪ್ರಕಾರ ವರ್ಷದ 12 ತಿಂಗಳಲ್ಲಿ ರಂಜಾನ್ ತಿಂಗಳು ಬ್ಯಾರಿಗಳಿಗೂ ಪವಿತ್ರವಾಗಿದ್ದು ಆ ತಿಂಗಳ ಮೂವತ್ತು ದಿನದ ಉಪವಾಸ ಎಲ್ಲಾ ಬ್ಯಾರಿಗಳಿಗೂ ಕಡ್ಡಾಯವಾಗಿದೆ ಇದನ್ನು ನೋಂಬು ಎನ್ನುತ್ತಾರೆ. ರಂಜಾನ್ ತಿಂಗಳಲ್ಲಿ ಸೂರ್ಯೋದಯದಿಂದ ಸೂರ್ಯಾಸ್ತಮದವರೆಗೆ ಉಪವಾಸ ಕಡ್ಡಾಯವಾಗಿ ಆಚರಿಸಬೇಕು. ಇದು ಕಠಿಣ ಆಚರಣೆಯಾಗಿದ್ದು ಪವಿತ್ರವಾಗಿದೆ.

ಈ ತಿಂಗಳಲ್ಲಿ ಬಡ ದೀನ ಜನರಿಗೆ ದಾನವನ್ನು (ಝುಕತ್) ನೀಡುವುದು ಕಡ್ಡಾಯವಾಗಿದೆ. ಪ್ರತಿಯೊಬ್ಬ ಮುಸ್ಲಿಮರಿಗೆ ತನ್ನ ಜೀವಿತದಲ್ಲಿ ಒಂದು ಬಾರಿ ಹಜ್ಜ್ ಯಾತ್ರೆ ಕಡ್ಡಾಯವಾಗಿದೆ. ಬ್ಯಾರಿಗಳು ಈ ಯಾತ್ರೆಯನ್ನು ಶ್ರದ್ಧಾಪೂರ್ವಕವಾಗಿ ಕೈಗೊಳ್ಳುತ್ತಾರೆ. ಈ ಯಾತ್ರೆಯನ್ನು ಕೈಗೊಂಡು ತಾಯ್ನಾಡಿಗೆ ಆಗಮಿಸಿದ ಬ್ಯಾರಿಗಳನ್ನು ಹಾಜಿ ಎಂಬ ನಾಮದಿಂದ ಕರೆಯುತ್ತಾರೆ. 30

ತುಳುನಾಡ ಬ್ಯಾರಿಗಳು ಆಚರಿಸುವ ವಿಜೃಂಭಣೆಯ, ಶ್ರದ್ಧೆಯ, ಧಾರ್ಮಿಕವಾದ ಆಚರಣೆ ಉರೂಸ್ ಸಮಾರಂಭ. ಇದು ಮುಖ್ಯವಾಗಿ ಭಾರತದ ಸುನ್ನಿಗಳು ಸೂಫೀ ಸಂತರ ಸಮಾಧಿ (ಗೋರಿ) ಗಳಿಗೆ ಸಲ್ಲಿಸುವ ವಿಶೇಷ ಗೌರವವಾಗಿದೆ. ದೆಹಲಿ ಸುಲ್ತಾನರು ಮತ್ತು ಮೊಘಲರ ಕಾಲದಲ್ಲಿ ಭಾರತದಲ್ಲಿ ಈ ರೀತಿಯ ಗೌರವವಾದ ಪ್ರಾರ್ಥನೆ ಭಾರತದ ಸುನ್ನಿ ಮುಸ್ಲಿಮರಲ್ಲಿ ಪ್ರಮುಖವಾಗಿ ಕಂಡು ಬರುತ್ತದೆ. ಉರೂಸ್ ಹಬ್ಬಗಳನ್ನು ಆಚರಿಸುವ ಸಂದರ್ಭದಲ್ಲಿ ಹಲವು ಸ್ಥಳೀಯ ವಿಶೇಷತೆಗಳು ಇದಕ್ಕೆ ಸೇರ್ಪಡೆಯಾಗುತ್ತದೆ.31

19 ಮತ್ತು 20ನೇ ಶತಮಾನದಲ್ಲಿ ದಕ್ಷಿಣ ಭಾರತದ ಕರಾವಳಿಯಲ್ಲಿ ಉರೂಸ್ ಹೆಚ್ಚಿನ ಆಕರ್ಷಣೆಯ ಆಚರಣೆಯಾಗುತ್ತದೆ. ಇದಕ್ಕೆ ಮುಖ್ಯ ಕಾರಣ ಮೊಹರಂ ಆಚರಣೆಯ ನಿಷೇಧ. ಉರೂಸ್ ಸಂದರ್ಭದಲ್ಲಿ ವಿಶೇಷ ಸಾಂಸ್ಕೃತಿಕ, ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತದೆ. ಇದಕ್ಕೆ ಮುಖ್ಯವಾದ ಉದಾಹರಣೆ ಉಳ್ಳಾಲ ಸಯ್ಯದ್ ಮದನಿ (ಖ.ಸ.ಅ) ರವರ ಉರೂಸ್ ಸಮಾರಂಭ ಇದನ್ನು ಕ್ರಿ.ಶ. 1920 ರ ನಂತರ ಐದು ವರ್ಷಕ್ಕೊಮ್ಮೆ ಆಚರಿಸುವ ರೂಢಿ ಆರಂಭವಾಯಿತು. ಈ ಸಂದರ್ಭದಲ್ಲಿ ವಿಸೇಷವಾಗಿ ಹರಕೆ, (ನೇರ್ಚೆ) ಹರಕೆ ಡಬ್ಬಿ, ಧಾರ್ಮಿಕ ಮತ ಪ್ರಸಂಗಗಳು ನಡೆಯುತ್ತದೆ. ಉರೂಸ್ ನ ಕೊನೆಯ ದಿನ ಸಾರ್ವಜನಿಕ ಅನ್ನದಾನ ಮಾಡಲಾಗುತ್ತದೆ. ತುಳುನಾಡ ಕರಾವಳಿಯ ಬ್ಯಾರಿಗಳ ಆಚರಣೆ ಅತ್ಯಂತ ಪ್ರಮುಖವಾಗಿ ಕಂಡು ಬರುತ್ತದೆ. ಈ ಸೂಫೀ ಸಂತರು ಜನಸಾಮಾನ್ಯರ ಮನಸ್ಸನ್ನು ಗೆದ್ದು ತಮ್ಮನ್ನು ಜನ ನೆನೆಸುವಂತಹ ಕಾರ್ಯವನ್ನು ಮಾಡಿರುವುದಾಗಿದೆ.32

ಕರಾವಳಿ ತುಳುನಾಡ ಬ್ಯಾರಿಗಳು ಆಚರಿಸುವ ಇತರ ಹಬ್ಬ ಹರಿದಿನಗಳು ಮೊಹರಂ, ಈದ್ ಮಿಲಾದ್, ರಾತೀಬ್, ಶಬೇ ಬರಾತ್ ಈದುಲ್-ಫಿತ್ರ್ , ಈದುಲ್ ಅಝುಹಾ. ಹಬ್ಬಗಳ ಪರಂಪರೆ ಮತ್ತು ಇತಿಹಾಸವು ಒಂದು ಜನಾಂಗ ಆರಂಭವಾದಾಗಿನಿಂದಲೇ ದೊರೆಯುತ್ತದೆ. ಕಾಲಕ್ಕೆ ತಕ್ಕಂತೆ ಆಯಾ ಜನಾಂಗಗಳಿಗೆ ವಿಶಿಷ್ಟವಾದ ಹಬ್ಬಗಳಿವೆ. ಹಬ್ಬ ಹರಿದಿನಗಳು ಪ್ರತಿಯೊಂದು ಜನಾಂಗದ ಸಂಸ್ಕೃತಿಯ ವೈಶಿಷ್ಯವಾದ ಭಾಗವಾಗಿದೆ. ಹಬ್ಬ ಹರಿದಿನಗಳು ಮನುಷ್ಯರ ಮನಸ್ಸಿಗೆ ಉಲ್ಲಾಸ ಆನಂದವನ್ನು ನೀಡುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಹಬ್ಬಗಳ ಆಚರಣಾ ವಿಧಿಗಳು ಆಯಾ ಧರ್ಮದ ತಿರುಳು ಮತ್ತು ಸ್ಫೂರ್ತಿಯನ್ನು ಬಿಂಬಿಸುತ್ತದೆ. ಈ ನೆಲೆಯಲ್ಲಿ ಪ್ರಪಂಚದಲ್ಲಿರುವ ಮುಸ್ಲಿಮರು ಆಚರಿಸುವ ಹಬ್ಬಗಳ ವಿಧಾನ ಪ್ರದೇಶದಿಂದ ಪ್ರದೇಶಕ್ಕೆ, ದೇಶದಿಂದ-ದೇಶಕ್ಕೆ ವ್ಯತ್ಯಾಸವಾಗಿರುತ್ತದೆ. ತುಳುನಾಡ ಬ್ಯಾರಿಗಳು ಆಚತರಿಸುವ ಹಬ್ಬಗಳಲ್ಲಿ ವ್ಯಕ್ತಿ ಪೂಜೆ ಅಥವಾ ಬೇರೆ ಯಾವುದೇ ಅಂಶಗಳು ಕಂಡು ಬರುವುದಿಲ್ಲ.33

ಮೌಲೋದ್ ಮಜ್ಲೀಸ್ (ಸಭೆ) ಒಂದು ಬರ್‌ಕತ್ ತುಂಬಿದ ಸಭೆಯಾಗಿದೆ. ಅದರಲ್ಲಿ ಭಾಗವಹಿಸಿ ಸಲಾತ್. ಧುಆ. ಕುರಾನ್ ಪಾರಾಯಣ ಮುಂತಾದವುಗಳ ಫಲ ಪಡೆದು ಭಕ್ತಿ ಭಾವುಕತೆ. ಪ್ರವಾದಿ ಪ್ರೇಮದ ಆದರ್ಶವನ್ನು ಮನದಲ್ಲಿ ತುಂಬಿ ನೆನಪಿಸುವುದು ಈ ಪಾರಾಯಣದ ನಿಜಬಾದ ನಂಬಿಕೆಯಾಗಿದೆ. ಇದನ್ನು ನೆಲದಲ್ಲಿ ಚಾಪೆ ಹಾಸಿ ಅದರ ಮೇಲೆ ಬಟ್ಟೆಯನ್ನು ಹಾಕಿ ಶಿಸ್ತಿನಿಂದ ಕುಳಿತು ಪಾರಾಯಣ ಮಾಡುವುದು ರೂಢಿಯಾಗಿದೆ. ಈ ರೀತಿಯ ಮೌಲೋದ್ ಪಾರಾಯಣದಲ್ಲಿ ವಿವಿಧ ಭಾಗಗಳಿವೆ. ಆಯಾ ಉದ್ದೇಶ ಮತ್ತು ಹರಕೆಯನ್ನು ಆಧರಿಸಿಕೊಂಡು ಈ ಪಾರಾಯಣ ಮಾಡುತ್ತಾರೆ. 34

ಮೊಹರಂ ತಿಂಗಳು ಇಸ್ಲಾಂ ಇತಿಹಾಸದಲ್ಲಿ ಒಂದು ದುಃಖದ ತಿಂಗಳಾಗಿದೆ. ಮೊಹರಂ ಹತ್ತು ರಂದು ಪ್ರವಾದಿಯವರ ಮೊಮ್ಮಗ ಹುಸೈನ್ ರವರು ಕರ್ಬಲಾ ಮೈದಾನದಲ್ಲಿ ಹುತಾತ್ಮರಾದ ದಿನವಾಗಿದ್ದು ಅವರ ನೆನಪಿಗೋಸ್ಕರ ಈ ದಿನವನ್ನು ಆಚರಿಸಲಾಗುತ್ತದೆ. ಮೊಹರಂ ನ 9 ಮತ್ತು 10 ನೇ ದಿನದಂದು ಉಪವಾಸವನ್ನು ಆಚರಿಸುವುದು ಸುನ್ನಿ ಮತ್ತು ಶಿಯಾ ಪಂಗಡಗಳೆರಡಕ್ಕೂ ಸಾಮಾನ್ಯವಾಗಿದೆ. ಭಾರತದಲ್ಲಿ ಈ ಆಚರಣೆ ಪ್ರಸಿದ್ಧಿ ಪಡೆದಿರುವುದು ಡೆಕ್ಕನ್ ನ ಶಿಯಾ ಸುಲ್ತಾನನ ಕಾಲದಲ್ಲಿ. ದಕ್ಷಿಣ ಕನ್ನಡ ಜಿಲ್ಲೆಯ ಮೊಹರಂ ನ ಆಚರಣೆ ಬಿಜಾಪುರ ಸುಲ್ತಾನರ ಕೊಡುಗೆಯಾಗಿದೆ. 19ನೇ ಶತಮಾನದಲ್ಲಿ ಬೆರಳೆಣಿಕೆಯಷ್ಟು ಶಿಯಾಗಳು ತುಳುನಾಡಿನಲ್ಲಿ ಆಯ್ದ ಪ್ರದೇಶದಲ್ಲಿ ಈ ಆಚರಣೆ ಮಾಡುತ್ತಾರೆ.35

ಪ್ರವಾದಿಯವರ ಜನ್ಮ ದಿನವನ್ನು ಆಚರಿಸುವುದನ್ನು ಈದ್-ಮಿಲಾದ್ ಆಗಿದ್ದು, ಇದು ಬ್ಯಾರಿಗಳ ಇನ್ನೊಂದು ಪ್ರಮುಖ ಹಬ್ಬವಾಗಿದೆ. ಪ್ರವಾದಿಯವರ ಜನ್ಮ ದಿನ ಮತ್ತು ನಿಧನ ಹೊಂದಿದ ದಿನ ಒಂದೇ ಆಗಿರುವುದರಿಂದ ಆ ದಿನವನ್ನು ಈದ್-ಮಿಲಾದ್ ಎಂದು ಆಚರಿಸಲಾಗುತ್ತದೆ. ಇದು ರಬೀಉಲ್ ಅವ್ವಲ್ ತಿಂಗಳಾಗಿರುವುದರಿಂದ ಇದೇ ತಿಂಗಳು ಬ್ಯಾರಿಗಳ ಮನೆ-ಮನೆಗಳಲ್ಲಿ ಮೌಲೋದ್ ಪಾರಾಯಣ ನಡೆಸಲಾಗುತ್ತದೆ. ಮೊದಲು ಜಮಾತ್ (ಮಸೀದಿ) ಯಲ್ಲಿ ಪಾರಾಯಣ ನಡೆಸುತ್ತಾರೆ. ನಂತರ ಸಣ್ಣ ಮಕ್ಕಳಿಗೆ ಮೆರವಣಿಗೆ, ಸಂಗೀತ, ಭಾಷಣ ಮುಂತಾದ ಧಾರ್ಮಿಕ ಕಾರ್ಯಕ್ರಮಗಳು ನಡೆಸುತ್ತಾರೆ. ವಿಜೇತ ಮಕ್ಕಳಿಗೆ ಬಹುಮಾನ ಮತ್ತು ಸಿಹಿ ತಿಂಡಿಯನ್ನು ವಿತರಿಸುತ್ತಾರೆ. ಕೊನೆಯಲ್ಲಿ ಅನ್ನದಾನ (ಸಿರೇಣಿ) ನೀಡಲಾಗುತ್ತದೆ.36

ಇರಾಕ್‌ನ ರಾಜಧಾನಿಯಾದ ಬಗ್ದಾದ್ ನಲ್ಲಿ ಅಂತ್ಯ ವಿಶ್ರಮಿಸುತ್ತಿರುವ ಸೂಫಿ ಸಂತ ಶೇಕ್ ಮೊಹಿಯುದ್ದೀನ್ ಅಬ್ದುಲ್ ಖಾದರ್ ಜೀಲಾನಿ ಯವರನ್ನು ಸ್ಮರಿಸುವುದನ್ನು ರಾತೀಬ್ ಎಂದು ಕರೆಯಲಾಗುತ್ತದೆ. ಇವರು ಮುಸ್ಲಿಂ ಸಮುದಾಯದಲ್ಲಿ ಅತ್ಯಂತ ಗೌರವವಕ್ಕೆ ಪಾತ್ರರಾದ ಸಂತರಾಗಿದ್ದು ಇವರನ್ನು ಸ್ಮರಿಸುವ ಗಾನವನ್ನು ಮೊಹಿಯುದ್ದೀನ್ ಮಾಲ ಎಂದು ಕರೆಯುತ್ತಾರೆ. ರಾತೀಬ್‌ನಲ್ಲಿ ಅತ್ಯಂತ ಪ್ರಸಿದ್ಧವಾದ ರಾತೀಬ್ ಮೊಹಿಯುದ್ದೀನ್ ರಾತೀಬ್ ಮತ್ತು ಕುತುಬಿಯ್ಯತ್ ಆಗಿದೆ. ಕುತುಬಿಯ್ಯತ್ ಅನ್ನು ದಫ್ ಹಾಡಿನ ಮೂಲಕ ನಡೆಸಲಾಗುತ್ತದೆ. ಇದೇ ತಿಂಗಳಲ್ಲಿ ಬ್ಯಾರಿಗಳು ಝಿಕ್ರ್ ನಡೆಸುವುದು ಸಾಮಾನ್ಯವಾಗಿದೆ. ಇದಕ್ಕೆ ಮುಖ್ಯ ಕಾರಣ ಉದ್ದೇಶ ಈಡೇರಿಕೆಗಾಗಿ ಹೊತ್ತ ನೇರ್ಚೆ (ಹರಕೆ).37

ಬರಾಅತ್ ಎಂಬುದು ಬ್ಯಾರಿ ಸಮುದಾಯ ಆಚರಿಸುವ ಸಾಮಾನ್ಯ ಆಚರಣೆಯಾಗಿದೆ. ಇದನ್ನು ಶಅಬಾನ್ ತಿಂಗಳ ೧೫ನೇ ದಿನದಂದು ಆಚರಿಸುತ್ತಾರೆ. ಈ ದಿನವನ್ನು ಮುಖ್ಯವಾಗಿ ಅಲ್ಲಾಹು (ದೇವರು) ಮುನುಷ್ಯನ ಜೀವನೋ ಪಾಧಿಗಿರುವ ಮತ್ತು ಮನುಷ್ಯನ ಅದೃಷ್ಟವನ್ನು ನಿರ್ಧರಿಸುವ ದಿನವೆಂದು ನಂಬುತ್ತಾರೆ. ಈ ದಿನದಂದು ಉಪವಾಸವನ್ನು ಆಚರಿಸುತ್ತಾರೆ. ಆ ದಿನ ಫಾತಿಹ ಸೂರ (ಕುರಾನಿನ ಪ್ರಥಮ ಅಧ್ಯಾಯ), ಯಾಸಿನ್ ಸೂರ (ಕುರಾನಿನ ಪ್ರಮುಖ ಅಧ್ಯಾಯ) ವನ್ನು ಓದಿ ಇಷ್ಟ ಸಿದ್ದಿ ಹಾಗೂ ಧೀರ್ಘ ಆಯುಷ್ಯ ಮತ್ತು ಕುಟುಂಬದಲ್ಲಿ ತೀರಿಕೊಂಡ ಜನರನ್ನು ನೆನೆಸಿ ದೈವ ಧಯೆ ಸಿಗಲು ಸಾಮೂಹಿಕ ಪ್ರಾರ್ಥನೆಯನ್ನು ಮಸೀದಿಗಳಲ್ಲಿ ಮತ್ತು ಮನೆ ಮನೆಗಳಲ್ಲಿ ಪ್ರಾರ್ಥನೆ, ದುಆ ನೆರವೇರಿಸಲಾಗುತ್ತದೆ.38



ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿಗಳು ಆಚರಿಸುವ ಪ್ರಮುಖ ಹಬ್ಬ ಈದುಲ್-ಫಿತ್ರ್ (ಚೆರಿಯ ಪೆರ್ನಾಲ್) ಈ ಹಬ್ಬವನ್ನು ಮುಖ್ಯವಾಗಿ ರಂಜಾನ್ ತಿಂಗಳಲ್ಲಿ ಆಚರಿಸಿಕೊಂಡ ಉಪವಾಸದ ಕೊನೆಯ ದಿನ ಆಚರಿಸುವ ಹಬ್ಬವಾಗಿದೆ. ಈ ಹಬ್ಬವನ್ನು ವಿಶ್ವದಾದ್ಯಂತ ಮುಸ್ಲಿಮರು ಆಚರಿಸುವ ಪ್ರಮುಖ ಹಬ್ಬವಾಗಿದೆ. ಆ ದಿನ ಬ್ಯಾರಿಗಳು ತಮ್ಮ ಮನೆಗಳಲ್ಲಿ ವಿವಿಧ ತಿಂಡಿ-ಖಾದ್ಯಗಳನ್ನು ತಯಾರಿಸಿ, ಸ್ನಾನ ಮಾಡಿ, ಹೊಸ ಬಟ್ಟೆ ಧರಿಸಿ, ಗಂಡಸರು, ಮಕ್ಕಳು ಮಸೀದಿಗೆ ತೆರಳ ಪ್ರಾರ್ಥನೆ ಸಲ್ಲಿಸಿ ಪರಸ್ಪರ ಅಲಂಗಾನ ಮಾಡಿ ಪ್ರೀತಿ ವಾತ್ಸಲ್ಯವನ್ನು ಹಂಚುತ್ತಾರೆ. ನಂತರ ಬಂದು ಮಿತ್ರರ ಮನೆಗಳಗೂ ಭೇಟಿ ನೀಡುತ್ತಾರೆ. ಈ ದಿನದಂದು ಫಿತ್ರ್ ಝುಕಾತ್ (ಕಡ್ಡಾಯ ದಾನ) ನೀಡುವುದು ಪ್ರತಿಯೊಬ್ಬ ಬ್ಯಾರಿಯ ಪ್ರಮುಖ ಕರ್ತವ್ಯವಾಗಿದೆ. ಈ ಹಬ್ಬವನ್ನು ಬಡವರ ಹಬ್ಬವೆಂದು ಕರೆಯಲಾಗಿದೆ. 39

ತುಳುನಾಡ ಬ್ಯಾರಿಗಳು ಆಚರಿಸುವ ಇನ್ನೊಂದು ಪ್ರಮುಖವಾದ ಹಬ್ಬ ಈದುಲ್-ಅಝ್‌ಹ ಇದನ್ನು ಬಕ್ರೀದ್ (ದೊಡ್ಡ ಪೆರ್ನಾಲ್) ಎಂದು ಕರೆಯುತ್ತಾರೆ. ಈ ಹಬ್ಬವನ್ನು ತ್ಯಾಗ ಬಲಿದಾನದ ಹಬ್ಬವೆಂದು ಪರಿಗಣಿಸಲಾಗಿದೆ. ಈ ಹಬ್ಬದ ದಿನದಂದು ಫಿತ್ರ್ (ದಾನ) ರೂಪದಲ್ಲಿ ಧಾನ್ಯಕ್ಕೆ ಬದಲಾಗಿ ಕುರಿ ಮಾಂಸ, ದನದ ಮಾಂಸವನ್ನು ಬಡ-ದೀನರಿಗೆ, ಸಂಬಂಧಿಕರಿಗೆ ಈದ್ ನಮಾಝ್ ನ ನಂತರ ವಿತರಿಸುತ್ತಾರೆ. ಈ ಹಬ್ಬವು ಅಲ್ಲಾಹು (ದೇವ) ನಿಗೆ ಬಲಿದಾನಗಳನ್ನು ಅರ್ಪಿಸುವುದು ಎಂದರ್ಥ. ಇಸ್ಲಾಮಿನ ಸಂಪ್ರದಾಯದಂತೆ ಉಳ್ಳವರು ಕಡ್ಡಾಯವಾಗಿ ಬಲಿದಾನವನ್ನು ಫಿತ್ರ್ (ದಾನ) ರೂಪದಲ್ಲಿ ನೀಡುವುದು ಕಡ್ಡಾಯವಾಗಿದೆ. ಇದನ್ನು ಕುರ್ಬಾನಿ ಎನ್ನುತ್ತಾರೆ. ಪ್ರವಾದಿ ಇಬ್ರಾಹಿಂ (ಸ.ಅ.) ತನ್ನ ಮಗ ಇಸ್ಮಾಯಿಲ್ (ಸ.ಅ.) ರನ್ನು ಅಲ್ಲಾಹನ ಆಜ್ಞೆಯಂತೆ ಬಲಿಕೊಡಲು ತಯಾರಾದಾಗ ಅವರ ಬದಲು ಆಡೊಂದು ಪ್ರತ್ಯಕ್ಷಗೊಂಡು ಇಸ್ಮಾಯಿಲ್ ರವರು ಪವಾಡ ಸದೃಶರಾಗಿ ಪಾರಾದ ಘಟನೆಯ ನೆನಪಿಗಾಗಿ ಆ ದಿನದಂದು ಬಲಿದಾನ ನೀಡುವುದು ಕಡ್ಡಾಯವಾಗಿದೆ.40

ಮುಸ್ಲಿಂ ಸಮುದಾಯದಲ್ಲಿ ಪ್ರಮುಖವಾಗಿರುವ ಹಲವು ಆಚರಣೆಗಳಗೆ ಭಿನ್ನವಾಗಿ ತುಳುನಾಡ ಬ್ಯಾರಿಗಳು ನೆರೆಹೊರೆಯ ಸಂಪ್ರದಾಯಗಳ ಪ್ರಭಾವವಿರುವುದು ಕಂಡು ಬರುತ್ತದೆ. ತಮ್ಮ ಪೂರ್ವಜರ ಹಲವಾರು ಸಾಂಪ್ರದಾಯಿಕ ನಂಬಿಕೆಗಳು ಒಳಗೊಂಡಿವೆ. ಮುಖ್ಯವಾಗಿ ತುಳುನಾಡಿನಲ್ಲಿ ಭೂತಗಳದ್ದು

ತುಳುವರು ನಂಬಿ ಭೂತಾರಾಧನೆ, ನೇಮಗಳನ್ನು, ಭೂತ ಸ್ಥಾನಗಳನ್ನು ಸ್ಥಾಪಿಸಿರುವುದು ಸಾಮಾನ್ಯವಾಗಿದೆ. ಆದರೆ ಬ್ಯಾರಿಗಳು ಈ ಅದೃಶ್ಯ ಶಕ್ತಿಗಳು ಮನುಷ್ಯನನ್ನು ತಪ್ಪು ದಾರಿಗೆ ಎಳೆಯುತ್ತದೆ ಎಂಬ ನಂಬಿಕೆಯಿದ್ದು "ಕುರಾನ್" ಮನುಷ್ಯರಿಗೆ ಶೈತಾನ್ (ದುಷ್ಟ ಶಕ್ತಿ) ನನ್ನು ಅನುಕರಣೆ ಮಾಡದಂತೆ ಎಚ್ಚರಿಸಿದೆ. ಬ್ಯಾರಿಗಳು ಈ ದುಷ್ಟಶಕ್ತಿ ಮಹಿಳೆಯರ ಮೈಲಿಗೆಯಲ್ಲಿರುವಾಗ (ಋತುಮತಿ), ಗರ್ಭಿಣಿಯಾಗಿರುವಾಗ ಅವರ ಮೇಲೆ ಪ್ರಭಾವ ಬೀರುತ್ತದೆಂದು ನಂಬಿದ್ದಾರೆ. ಮಕ್ಕಳನ್ನು ಹೊರಗಡೆ ಒಬ್ಬರನ್ನೇ ಕಳುಹಿಸುವುದಕ್ಕೆ ಹೆದರುತ್ತಾರೆ. ಈ ನಂಬಿಕೆ ದೈವಗಳ ಬಗೆಯಾಗಿದ್ದು, ಇದು ಕರಾವಳಿ ಕರ್ನಾಟಕದ ತುಳು ನಾಡಿನಲ್ಲಿ ಸಹಜವಾಗಿದೆ.41

ಆತ್ಮಹತ್ಯೆ, ಕೊಲೆಯಾದ ಅಥವಾ ಅಪಘಾತದಲ್ಲಿ ಮರಣ ಹೊಂದಿದ ವ್ಯಕ್ತಿಗಳ ಆತ್ಮವು ದೆವ್ವವಾಗಿ ಮಾರ್ಪಡುತ್ತದೆ ಎಂದು ನಂಬುತ್ತಾರೆ. ಬ್ಯಾರಿಗಳಿಗೆ ದೆವ್ವಗಳ ಕುರಿತು ಸ್ಪಷ್ಟ ಕಲ್ಪನೆ ಇಲ್ಲದಿದ್ದರೂ ವ್ಯಕ್ತಿಯಲ್ಲಿ ರೂಹ್ (ರೂಹಾನಿ) ಇರುತ್ತದೆ ಎಂದು ನಂಬುತ್ತಾರೆ. ದೆವ್ವಗಳ ಉಪಟಳದಿಂದಲೇ ನವ ವಿವಾಹಿತೆ ವಧು ಮತಿ ಭ್ರಾಂತಳಾಗುವುದು, ಮಗು ಮಾನಸಿಕವಾಗಿ ಅಸ್ವಸ್ಥವಾಗಿರುವುದು ಮತ್ತು ಗರ್ಭಿಣಿ ಮಹಿಳೆ ಖಿನ್ನತೆಗೆ ಒಳಗಾಗುವುದು ಇದರಿಂದಲೇ ಎಂದು ನಂಬುತ್ತಾರೆ. ದುಷ್ಟ ಶಕ್ತಿಗಳಿಂದ ಮನುಷ್ಯರನ್ನು ಬೇರ್ಪಡಿಸುವುದು ಮಂತ್ರವಾದಿಗಳು ಮತ್ತು ಮೌಲ್ವಿಗಳ ಮೊರೆ ಹೋಗುವುದು ತುಳುನಾಡಿನಲ್ಲಿ ಸಾಮಾನ್ಯವಾಗಿದೆ. ದೆವ್ವಗಳು ಜನರಿಗೆ ಭಯವನ್ನು ಉಂಟು ಮಾಡಿದರೆ ಜ್ವರ ಬಾಧೆ ಅರಂಭವಾಗುತ್ತದೆ. ದೆವ್ವಗಳು ಮರಳು ಎಸೆದರೆ ಜ್ವರ ಕಾಣಿಸಿಕೊಳ್ಳುತ್ತದೆ ಎಂದು ನಂಬುತ್ತಾರೆ. ಹೊಟ್ಟೆನೋವು ಆದರೆ ಮೆಣಸು, ಹುಳಿ, ಉಪ್ಪನ್ನು ಬೆರೆಸಿ ಅದರ ಮಿಶ್ರಣವನ್ನು ಮಂತ್ರವಾದಿಗೆ ನೀಡಲಾಗುತ್ತದೆ. ಇದನ್ನು ಮಂತ್ರಿಸಿದ ನಂತರ ಹೊಟ್ಟೆನೋವಿನ ವ್ಯಕ್ತಿಗೆ ನೀಡಲಾಗುತ್ತದೆ. ಹಸಿದಿರುವ ವ್ಯಕ್ತಿಯ ಎದುರು ಸ್ವಾದಿಷ್ಟ ಖಾದ್ಯವನ್ನು ತಿಂದಾಗ ಆ ವ್ಯಕ್ತಿ ಆಸೆ ಪಟ್ಟರೆ ಆ ಹೊಟ್ಟೆನೋವಿಗೆ (ಕೊದಿ) ಎನ್ನುತ್ತಾರೆ. ನುರಿತ ಮಂತ್ರವಾದಿಗಳು ಬ್ಯಾರಿಗಳಿಗೆ 'ತಾಯಿತ' ಮತ್ತು 'ಇಸುಮ್' ಮಾಡುವುದರ ಮೂಲಕ ಅದರಿಂದ ಮುಕ್ತಿ ಹೊಂದಬಹುದೆಂದು ನಂಬುತ್ತಾರೆ. ಇತ್ತೀಚಿನ ದಿನಗಳಲ್ಲಿ ಶೈಕ್ಷಣಿಕ ಅಭಿಯಾನದ ಸಹಾಯದಿಂದ ಬ್ಯಾರಿಗಳು ತಮ್ಮಲ್ಲಿನ ಮೂಡನಂಬಿಕೆಗಳನ್ನು ಹೋಗಲಾಡಿಸಲು ವಿಶೇಷ ಪ್ರಯತ್ನ ನಡೆಸುತ್ತಿದ್ದಾರೆ.42

ತುಳುನಾಡ ಬ್ಯಾರಿಗಳ ಶೈಕ್ಷಣಿಕ ಪ್ರಗತಿಯ ಬಗ್ಗೆ ಹೇಳುವುದಾದರೆ ಕ್ರಿ.ಶ. 1822 ರಲ್ಲಿ ಕೆನರಾದ ಕಲೆಕ್ಟರ್ ಮಾಹಿತಿ ಪ್ರಕಾರ ಸಾಮಾನ್ಯವಾಗಿ ಇಲ್ಲಿ ಭೌತ ರೂಪ ವಿಜ್ಞಾನವನ್ನು ಯಾವುದೇ ಸಾಲಾ-ಕಾಲೇಜುಗಳಲ್ಲಿ ಭೋದಿಸಲು ಅದಕ್ಕಾಗಿ ನಿರ್ದಿಷ್ಟ ಶಾಲೆಗಳು ಕಾಣುವುದಿಲ್ಲ ಮತ್ತು ಭೋದಿಸುವ ಶಿಕ್ಷಕರು ಇಲ್ಲವೆಂದು ತಿಳಿಸುತ್ತಾರೆ. ಹೀಗಾಗಿ ಇಂಗ್ಲೀಷ್ ಶಿಕ್ಷಣದ ಪ್ರಗತಿಯು ನಿಧಾನವಾಗಿ ತನ್ನ ಪ್ರಭಾವವನ್ನು ಬೀರುವುದನ್ನು ಕಾಣಬಹುದು. ಈ ನೆಲೆಯಲ್ಲಿ ಈ ಬ್ಯಾರಿ ಜನಾಂಗದ ಇತಿಹಾಸ ಶೈಕ್ಷಣಿಕ ಹಿನ್ನಡೆಯಿಂದಾಗಿ ಮಸುಕಾಗಿರಬಹುದೆಂದು ತಿಳಿಯಬಹುದು.

1871 ರ ಜನಗಣತಿ ಪ್ರಕಾರ ಒಟ್ಟು 9,18,362 ಜನಸಂಖ್ಯೆಯಲ್ಲಿ ಮುಸ್ಲಿಮರು 83,178 (98%) ಇದರಲ್ಲಿ ಓದಲು ಬರೆಯಲು ಗೊತ್ತಿದ್ದವರು 3,171 ಅಂದರೆ 3.8% ಹಾಗೂ 1881 ರ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಮುಸ್ಲಿಮರು 10.60% ರಷ್ಟಿದ್ದು ಎಂದು ಪರಿಗಣಿಸಲಾಗಿದೆ. 43

ಬ್ರಿಟೀಷ್ ದಾಖಲೆಗಳ ಪ್ರಕಾರ ಮುಸ್ಲಿಮರು (ಬ್ಯಾರಿಗಳು) ಹೆಚ್ಚಾಗಿ ಸಾಂಪ್ರದಾಯಿಕ ಶಿಕ್ಷಣವನ್ನು ಪಡೆಯುತ್ತಿದ್ದರು. ಈ ಜನ ಪಾಶ್ಚಿಮಾತ್ಯ ಶಿಕ್ಷಣದ ಲಾಭವನ್ನು ಪಡೆಯದಂತೆ ತಡೆಯಲಾಗಿತ್ತು ಎಂದು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ. ಇವರು ತಮ್ಮ ಮಕ್ಕಳಿಗೆ ಬಹಳಷ್ಟು ಕಾಳಜಿಯಿಂದ ಕುರಾನ್ ಶಿಕ್ಷಣ ನೀಡುತ್ತಿದ್ದರೆಂದು ತಿಳಿಯಲಾಗಿದೆ. ಈ ಮೂಲಕ ಶಿಕ್ಷಣ ಕ್ಷೇತ್ರದಲ್ಲಿ ಬ್ಯಾರಿಗಳು ಹೆಚ್ಚಿನ ಆಸಕ್ತಿ ವಹಿಸಿಲ್ಲ ಎಂಬುದನ್ನು ಸಾಬೀತು ಪಡಿಸಲು 1881ರ ಶಿಕ್ಷಣ ಪಡೆದ ಜನರಲ್ಲಿ 4,476 ಪುರುಷರು ಮತ್ತು 604 ಮಹಿಳೆಯರಿದ್ದು 1893 ರ ವರೆಗೆ ಉನ್ನತ ಶಿಕ್ಷಣದಲ್ಲಿ ಮೆಟ್ರಿಕ್ಯುಲೇಶನ್ ಪರೀಕ್ಷೆ ಪಾಸು ಮಾಡಿದ ಮಹಿಳೆಯರ ಸಂಖ್ಯೆ 183 ಆಗಿತ್ತು. ಇದರಲ್ಲಿ 7 ಮಂದಿ ಬಿ.ಎ. ಪರೀಕ್ಷೆಗೆ ಹಾಜರಾಗಿದ್ದು ೧ಲಖ ಜನರಲ್ಲಿ ಒಬ್ಬ ಮುಸ್ಲಿಂ, ಒಬ್ಬ ಬ್ರಾಹ್ಮಣ, ನಾಲ್ಕು ಪಾರ್ಸಿ, 150 ಐರೋಪಿಯನ್ನರು ಇದ್ದರೆಂದು 1893 -94 ರ ಮದ್ರಾಸು ವಿಶ್ವವಿದ್ಯಾನಿಲಯದ ವರದಿ ತಿಳಿಸುತ್ತದೆ.44

1895ರ ಗ್ಯಾಸೆಟಿಯರ್ ವರದಿ ಪ್ರಕಾರ ಹಿಂದುಗಳು ಶಿಕ್ಷಣದಲ್ಲಿ ಹಿಂದುಳಿದವರಾಗಿದ್ದು ಇತರ ಜನಾಂಗದವರು ಶಿಕ್ಷಣದಲ್ಲಿ ಮೇಲುಗೈ ಸಾಧಿಸಿದ್ದಾರೆಂದು ತಿಳಿಸುತ್ತದೆ. ಕುರಾನ್ ಶಾಲೆಗಳಲ್ಲಿ 5.95% ಹುಡುಗರು & 5.64% ಮಹಿಳೆಯರು ಓದುತ್ತಿದ್ದರು. ಒಟ್ಟು 2427 ಮುಸ್ಲಿಮರ ಅಕ್ಷರಸ್ಥರಲ್ಲಿ ಖಂಜ ಮಹಿಳೆಯರಿದ್ದರು. ಮುಸ್ಲಿಂ ಶಿಕ್ಷಣ ಪದ್ಧತಿಯು ಸಾಂಪ್ರದಾಯಿಕವಾಗಿದ್ದು ಧಾರ್ಮಿಕ ಅಂಶಗಳಿಗೆ ಹೆಚ್ಚು ಒತ್ತು ನೀಡುತ್ತದೆ. ಈ ಶಾಲೆಗಳಲ್ಲಿ ಕುರಾನ್ ತರಗತಿಗಳು ಮಾತ್ರ ನಡೆಯುತ್ತಿತ್ತು. ಇಲ್ಲಿ ಆಧುನಿಕ ಶಿಕ್ಷಣ ನೀಡುತ್ತಿರಲಿಲ್ಲ ವೆಂದು ಗ್ಯಾಸೆಟಿಯರ್ ತಿಳಿಸುತ್ತದೆ. 45

1921ರ ಜನಗಣತಿ ಪ್ರಕಾರ ಬ್ಯಾರಿಗಳಲ್ಲಿ 12.7 ಪುರುಷರು ಮತ್ತು 1.5 ಮಹಿಳೆಯರು ಅಕ್ಷರಸ್ಥರಾಗಿದ್ದರು. 1931 ರ ಜನಗಣತಿ ಪ್ರಕಾರ 13.4% ಪುರುಷರು ಮತ್ತು 1.8% ಮಹಿಳೆಯರು ಅಕ್ಷರಸ್ಥರಾಗಿದ್ದು ಒಟ್ಟು ಜನಸಂಖ್ಯೆ 13,72,241 ರಲ್ಲಿ ಬ್ಯಾರಿಗಳು ಮತ್ತು ಇತರ ಮುಸ್ಲಿಮರು ಸೇರಿ 1,80,210 ಜನಸಂಖ್ಯೆಯಿತ್ತೆಂದು ತಿಳಿಸುತ್ತದೆ. 1891 ರ ಜನಗಣತಿ ಪ್ರಕಾರ ಮಂಗಲೂರಿನ ಒಟ್ಟು ಜನಸಂಖ್ಯೆಯಲ್ಲಿ 18.53% ರಷ್ಟು ಮುಸ್ಲಿಮರಿದ್ದು ಇವರು ವಿವಿಧ ಉದ್ಯೋಗ ವ್ಯಾಪಾಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆಂದು ಉಲ್ಲೇಖಿಸಲಾಗಿದೆ. 46

20ನೇ ಶತಮಾನದ ಆರಂಭದಿಂದಲೇ ಬ್ಯಾರಿ ಸಮುದಾಯ ಶಿಕ್ಷಣದಲ್ಲಿ ಹಿಂದುಳಿದಿರುವ ಕುರಿತು ಜ್ಞಾನೋದಯವಾಗಿ ಆ ಕುರಿತು ಬ್ರಿಟೀಷ್ ಸರಕಾರದೊಡನೆ ವ್ಯವಸಹರಿಸಿ ಒತ್ತಾಯ ಹೇರಬೇಕೆಂಬ ನಿಲುವನ್ನು ತಾಳಿರುವುದನ್ನು ಕಾಣಬಹುದಾಗಿದೆ. ಬ್ಯಾರಿ ಜನರುಳ್ಳ ಪ್ರದೇಶದಲ್ಲಿ ಹೊಸ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಲು ಕಡ್ಡಾಯ ಶಿಕ್ಷಣವನ್ನು ನೀಡಲು ಪಂಚಮ ಸಾಲೆಗಳಿಗೆ ನೀಡಿದ ಮಹತ್ವವನ್ನೇ ಈ ಸಲೆಗಳಿಗೆ ನೀಡುವಂತೆ ಬ್ಯಾರಿ ನಾಯಕರು ಮನವಿ ಮಾಡಿರುವುದನ್ನು ಕಾಣಬಹುದು.47

1908 ರಲ್ಲಿ ಮಂಗಳೂರಿನಲ್ಲಿ ಸ್ಥಾಪನೆಗೊಂಡ ಮುಸ್ಲಿಂ ಶಾಲೆಯನ್ನು ಸರ್ಕಾರ ಮುನ್ಸಿಪಾಲಿಟಿಗೆ ವರ್ಗಾಯಿಸುವ ಪ್ರಸ್ತಾವ ಬಂದಾಗ ಬ್ಯಾರಿ ನಾಯಕರು ತೀವ್ರವಾಗಿ ವಿರೋಧಿಸಿದ್ದನ್ನು ಕಾಣಬಹುದು 1920-30ರ ದಶಕದಲ್ಲಿ ಬ್ಯಾರಿ ಜನಾಂಗದಲ್ಲಿ ಮಧ್ಯಮ ವರ್ಗ ಸೃಷ್ಟಿಯಾಗುತ್ತಾ ಈ ವರ್ಗ ಪ್ರವರ್ಧಮಾನಕ್ಕೆ ಬರುತ್ತಿದ್ದಂತೆ ಶಿಕ್ಷಣದ ಪ್ರಾಥಮಿಕ ಮತ್ತು ಉನ್ನತದ ಕುರಿತು ಹೆಚ್ಚು ಆಸಕ್ತಿ ಮತ್ತು ಕಾಳಜಿ ಉಂಟಾಗಲು ಆರಂಭವಾಗುತ್ತದೆ.48

ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಬ್ಯಾರಿಗಳ ಶೈಕ್ಷಣಿಕ ಹಿನ್ನಲೆ ಅವಲೋಕಿಸಿದಾಗ ಈ ಸಮುದಾಯ ಹಿಂದುಳಿದಿರುವಿಕೆಗೆ ಮುಖ್ಯ ಕಾರಣ ಅನಕ್ಷರತೆ. 20ನೇ ಶತಮಾನದ ಆರಂಭದಲ್ಲಿ ಆಧುನಿಕ ಶಿಕ್ಷಣದ ಚರ್ಚೆಗಳು ನಡೆದು ಶ್ರೀಮಂತ ಮುಸ್ಲಿಂ ಮನಸ್ಸುಗಳು, ಶಿಕ್ಷಣದ ಮೂಲಕ ಹೊರತು ಬ್ಯಾರಿ ಸಮುದಾಯದ ಪ್ರಗತಿಗೆ ಸಾಧ್ಯವಿಲ್ಲ ಎಂಬ ತೀರ್ಮಾನಕ್ಕೆ ಬಂದು 1922 ರಲ್ಲಿ ಮದರಸತುಲ್ ಬದ್ರಿಯ ಎಂಬ ಸಂಸ್ಥೆ ಸ್ಥಾಪಿಸುತ್ತಾರೆ. 1928 ರಲ್ಲಿ ಮುಸ್ಲಿಂ ಎಜುಕೇಷನ್ ಅಸೋಸಿಯೇಷನ್ ಹೆಸರಿನಡಿ ಬದ್ರಿಯಾ ಪ್ರಾಥಮಿಕ ಶಾಲೆಯನ್ನು ತೆರೆಯಲಾಗುತ್ತೆ. ಇದು ದಕ್ಷಿಣ ಕನ್ನಡದ ಪ್ರಥಮ ಮುಸ್ಲಿಂ ಶಾಲೆಯಾಗಿರುತ್ತದೆ. ಇಂದು ಈ ಸಂಸ್ಥೆ ಬದ್ರಿಯಾ ಶಿಕ್ಷಣ ಸಂಸ್ಥೆಯಾಗಿ ಕನ್ನಡ, ಇಂಗ್ಲೀಷ್, ಪದವಿಪೂರ್ವ, ಪದವಿ, ಕಾಲೇಜು ಘಟಕಗಳಿರುವುದನ್ನು ಕಾಣಬಹುದಾಗಿದೆ. 49

ಇಂದು ನಗರದ ಪ್ರಮುಖ ಇತರ ಎಲ್ಲಾ ಶಾಲಾ – ಕಾಲೇಜುಗಳಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಬ್ಯಾರಿ ಸಮುದಾಯದ ಗಂಡು-ಹೆಣ್ಣು ಮಕ್ಕಳು ಶಿಕ್ಷಣವನ್ನು ಪಡೆಯುತ್ತಿದ್ದು ಒಂದು ಕಾಲದಲ್ಲಿ ಮುಸ್ಲಿಂ ಹೆಣ್ಣು ಮಕ್ಕಳು ಕೇವಲ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಪಡೆದು ತಮ್ಮ ವಿದ್ಯಾಭ್ಯಾಸವನ್ನು ಮೊಟಕಗೊಳಿಸುತ್ತಿದ್ದರು. ಇಂದು ನಗರದ ಎಲ್ಲಾ ಪದವಿಪೂರ್ವ ಮತ್ತು ಪದವಿ ಕಾಲೇಜುಗಳಲ್ಲಿ ಹೆಣ್ಣು ಮಕ್ಕಳೇ ಅಧಿಕ ಸಂಖ್ಯೆಯಲ್ಲಿರುವುದನ್ನು ಗಮನಿಸಬಹುದು. ಮುಖ್ಯವಾಗಿ ಮಹಿಳಾ ವಿದ್ಯಾ ಸಂಸ್ಥೆಗಳಲ್ಲಿ ೫೦-೭೫% ದಷ್ಟು ಮುಸ್ಲಿಂ ಹೆಣ್ಣು ಮಕ್ಕಳು ಉನ್ನತ ಶಿಕ್ಷಣ ಪಡೆಯುತ್ತಿರುವುದು ಬ್ಯಾರಿ ಸಮುದಾಯ ಶಿಕ್ಷಣ ಕ್ಷೇತ್ರದಲ್ಲಿ ಯಾವ ರೀತಿ ಮುಂದುವತರಿಯುತ್ತಿದೆ ಎನ್ನುವುದಕ್ಕೆ ಸ್ಪಷ್ಟ ಉದಾಹರಣೆ. ಶ್ರೀಮಂತ ಮುಸ್ಲಿಂ ವಿದ್ಯಾಭಿಮಾನಿಗಳು ಶಿಕ್ಷಣ ಸಂಸ್ಥೆಯ ಸ್ಥಾಪನೆ ಮತ್ತು ಮುಸ್ಲಿಂ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ವಿಸೇಷ ಪ್ರೋತ್ಸಾಹ ನೀಡುತ್ತಿದ್ದು ಅದರ ಜೊತೆಗೆ ಸಾಮಾಜಿಕ, ಶೈಕ್ಷಣಿಕ ಮತ್ತು ಧಾರ್ಮಿಕ ಕಾಳಜಿಯನ್ನು ಹೊಂದಿ ಕಾರ್ಯ ನಿರ್ವಹಿಸುತ್ತಿರುವ ಜಮಿಯತುಲ್ ಫಲಾಹ್, ಜಮಾತೆ ಇಸ್ಲಾಂ, ಟ್ಯಾಲೆಂಟ್ ರೀಸರ್ಚ್ ಫೌಂಡೇಶನ್ ಮುಂತಾದ ಸಂಸ್ಥೆಗಳ ಪಾತ್ರವು ಅಪಾರವಾದುದ್ದಾಗಿದೆ.

**ಪರಾಮರ್ಶನ ಗ್ರಂಥಗಳು :-**


1. ಡಾ. ಉಪ್ಪಂಗಳ ರಾಮಭಟ್ಟ–ತುಳುನಾಡಿನ ತೆಂಕ ನುಡಿಯ ಬ್ಯಾರಿ ಆಡು–ನುಡಿ(ಪೆರಿಮೆ) ಪುಟಸಂಖ್ಯೆ 40
2. ಹರುಮಲಾರ್ ಬ್ಯಾರಿ ಭಾಷೆಯ ಉಗಮ ಮತ್ತು ವೈವಿಧ್ಯತೆ – ಬ್ಯಾರಿ ಅಧ್ಯಯನ 2008 ಪುಟಸಂಖ್ಯೆ –8
3. ಡಾ. ಉಪ್ಪಂಗಳ ರಾಮಭಟ್ಟ – ತುಳುನಾಡಿನ ತೆಂಕ ನುಡಿಯ ಬ್ಯಾರಿ ಆಡು–ನುಡಿ (ಪೆರಿಮೆ)ಪುಟಸಂಖ್ಯೆ41

   ಹರುಮಲಾರ್ – ಮಂಗಳೂರು ದರ್ಶನ – ಸಂಪುಟ 2 – ಪುಟ ಸಂಖ್ಯೆ – 762
4. ಪಿ.ಕೆ. ಸಂಶುದ್ದೀನ್ ಉಳ್ಳಾಲ ಪೆರಿಮೆ – ಪುಟ ಸಂಖ್ಯೆ –70
5. ಪ್ರೊ. ಚಂದ್ರಕಲಾ – ಬ್ಯಾರಿ ಜನಾಂಗ ಮತ್ತು ಸಾಮಾಜಿಕ ಬದಲಾವಣೆ (ಪೆರಿಮೆ) ಪುಟ ಸಂಖ್ಯೆ 86
6. ಅದೇ – ಪುಟ ಸಂಖ್ಯೆ 87
7. ಪ್ರೊ. ಹುಲುಗಪ್ಪ ಹೆಚ್.ಆರ್. – ಬ್ಯಾರಿ ಸಮುದಾಯ ಭಾಷೆ & ಸಂಸ್ಕೃತಿ (ಪೆರಿಮೆ) ಪುಟ ಸಂಖ್ಯೆ –100
8. ಪ್ರೊ. ಫಾಮಿದಾ ಮನ್ಸೂರ್ – ಬ್ಯಾರಿ ಸಂಸ್ಕೃತಿ (ಪೆರಿಮೆ) ಪುಟ ಸಂಖ್ಯೆ – 116
9. ಪ್ರೊ. ಫಾಮಿದಾ ಮನ್ಸೂರ್ – ಬ್ಯಾರಿ ಸಂಸ್ಕೃತಿ (ಪೆರಿಮೆ) ಪುಟ ಸಂಖ್ಯೆ – 117
10. ಪ್ರೊ. ಹುಲುಗಪ್ಪ ಹೆಚ್.ಆರ್. – ಬ್ಯಾರಿ ಸಮುದಾಯ ಭಾಷೆ &ಸಂಸ್ಕೃತಿ (ಪೆರಿಮೆ) ಪುಟ ಸಂಖ್ಯೆ – 101
11. ಬಿ.ಎಂ. ಹನೀಫ್ – ಬ್ಯಾರಿ ಸಂಸ್ಕೃತಿ ಅಂದು–ಇಂದು (ಬ್ಯಾರಿ ಅಧ್ಯಯನ–2008) ಪುಟ ಸಂಖ್ಯೆ – 18
12. ಪ್ರೊ. ಬಿ.ಎಂ.ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 143
13. ಬಿ.ಎಂ. ಹನೀಫ್–ಬ್ಯಾರಿ ಸಂಸ್ಕೃತಿ ಅಂದು ಇಂದು (ಬ್ಯಾರಿ ಅಧ್ಯಯನ–2008) ಪು.ಸಂಖ್ಯೆ–19
14. ಹಂಝು ಮಲಾರ್ – ಮಂಗಳೂರು ದರ್ಶನ – ಸಂಪುಟ–೨ ಪುಟ ಸಂಖ್ಯೆ–767
15. ಬಿ.ಎಂ. ಹನೀಫ್ – ಬ್ಯಾರಿ ಸಂಸ್ಕೃತಿ ಅಂದು–ಇಂದು (ಬ್ಯಾರಿ ಅಧ್ಯಯನ–2008) ಪುಟ ಸಂಖ್ಯೆ 19
16. ಹಂಝು ಮಲಾರ್ – ಮಂಗಳೂರು ದರ್ಶನ – ಸಂಪುಟ ೨ – ಪುಟ ಸಂಖ್ಯೆ – 768
17. ಬಿ.ಎಂ. ಹನೀಫ್ – ಬ್ಯಾರಿ ಸಂಸ್ಕೃತಿ ಅಂದು–ಇಂದು (ಬ್ಯಾರಿ ಅಧ್ಯಯನ–2008) ಪುಟ ಸಂಖ್ಯೆ 20
18. ಪ್ರೊ. ಫಾಮಿದಾ ಮನ್ಸೂರ್ – ಬ್ಯಾರಿ ಸಂಸ್ಕೃತಿ (ಪೆರಿಮೆ) ಪುಟ ಸಂಖ್ಯೆ – 118
19. ಹಂಝು ಮಲಾರ್ – ಮಂಗಳೂರು ದರ್ಶನ – ಸಂಪುಟ ೨ – ಪುಟ ಸಂಖ್ಯೆ – 769
20. ಅದೇ – ಪುಟ ಸಂಖ್ಯೆ – 770
21. ಅದೇ – ಪುಟ ಸಂಖ್ಯೆ – 771
22. ಅದೇ – ಪುಟ ಸಂಖ್ಯೆ – 771
23. ಅದೇ – ಪುಟ ಸಂಖ್ಯೆ – 769

24. ಅದೇ – ಪುಟ ಸಂಖ್ಯೆ – 769

25. ಅದೇ – ಪುಟ ಸಂಖ್ಯೆ – 769

26. ಪ್ರೊ. ಬಿ.ಎಂ.ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ - 144

27. ಅದೇ – ಪುಟ ಸಂಖ್ಯೆ – 145

28. ಅದೇ – ಪುಟ ಸಂಖ್ಯೆ – 148

29. ಹಂಝ ಮಲಾರ್ – ಮಂಗಳೂರು ದರ್ಶನ – ಸಂಪುಟ ೨ – ಪುಟ ಸಂಖ್ಯೆ – 763

30. ಪ್ರೊ. ಬಿ.ಎಂ.ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 148

31. ಹಂಝ ಮಲಾರ್ – ಮಂಗಳೂರು ದರ್ಶನ – ಸಂಪುಟ ೨ – ಪುಟ ಸಂಖ್ಯೆ – 763

32. ಬಿ.ಎಂ. ಹನೀಫ್–ಬ್ಯಾರಿ ಸಂಸ್ಕೃತಿ ಅಂದು ಇಂದು (ಬ್ಯಾರಿ ಅಧ್ಯಯನ–2008) ಪು.ಸಂಖ್ಯೆ–20

33. ಪ್ರೊ. ಬಿ.ಎಂ.ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 148

34. ಅದೇ – ಪುಟ ಸಂಖ್ಯೆ – 149

35. ಪ್ರೊ. ಫಾಮಿದಾ ಮನ್ಸೂರ್ – ಬ್ಯಾರಿ ಸಂಸ್ಕೃತಿ (ಪೆರಿಮೆ) ಪುಟ ಸಂಖ್ಯೆ – 119

36. ಅದೇ – ಪುಟ ಸಂಖ್ಯೆ – 120

37. ಹಂಝ ಮಲಾರ್ – ಮಂಗಳೂರು ದರ್ಶನ – ಸಂಪುಟ ೨ – ಪುಟ ಸಂಖ್ಯೆ – 764

38. ಬಿ.ಎಂ. ಹನೀಫ್–ಬ್ಯಾರಿ ಸಂಸ್ಕೃತಿ ಅಂದು ಇಂದು (ಬ್ಯಾರಿ ಅಧ್ಯಯನ–2008) ಪು.ಸಂಖ್ಯೆ–20

39. ಪ್ರೊ. ಬಿ.ಎಂ.ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 150

40. ಪಿ.ಕೆ. ಸಂಶುದ್ದೀನ್ ಉಳ್ಳಾಲ ಪೆರಿಮೆ – ಪುಟ ಸಂಖ್ಯೆ –70

41. ಅದೇ – ಪುಟ ಸಂಖ್ಯೆ –71

42. ಕೆ.ಎಂ. ಲೋಕೇಶ್ –ಪೆರಿಮೆ – ಪುಟ ಸಂಖ್ಯೆ –17

43. ಅದೇ – ಪುಟ ಸಂಖ್ಯೆ –18

44. ಅದೇ – ಪುಟ ಸಂಖ್ಯೆ –19

45. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು –ಪುಟ ಸಂಖ್ಯೆ –146

46. ಅದೇ –ಪುಟ ಸಂಖ್ಯೆ –147

47. ಅದೇ –ಪುಟ ಸಂಖ್ಯೆ –148

48. ಡಾ.ಎನ್. ಇಸ್ಮಾಯಿಲ್–ಮಂಗಳೂರು ದರ್ಶನ–ಸಂಪುಟ –೨ ಪುಟ ಸಂಖ್ಯೆ 651

49. ಅದೇ ಪುಟ ಸಂಖ್ಯೆ 652

# ಅಧ್ಯಾಯ –5

## ಜಿಲ್ಲೆಯ ಸೌಹಾರ್ದತೆಯಲ್ಲಿ ಬ್ಯಾರಿ ಸಮುದಾಯ

ವೈವಿಧ್ಯತೆಯಲ್ಲಿ ಏಕತೆಯನ್ನು ಸಾರುವ ತುಳುನಾಡು ಕೋಮು ಸೌಹಾರ್ದತೆಗೆ ಇತಿಹಾಸ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿ ಹಿಂದುಗಳು, ಮುಸ್ಲಿಮರು, ಜೈನರೂ, ಕ್ರೈಸ್ತರು, ಮುಖ್ಯ ಧಾರ್ಮಿಕ ಸಮುದಾಯಗಳಾಗಿದ್ದು ತುಳುನಾಡಿನ, ಎಲ್ಲ ಧಾರ್ಮಿಕ ಪಂಗಡ ತನ್ನದೇ ಆದ ಶ್ರೀಮಂತಿಕೆಯನ್ನು ನೀಡಿದೆ. ತುಳುನಾಡಿನ ಬಹು ಸಂಸ್ಕೃತಿಯುಳ್ಳ ವೈದಿಕ ಧರ್ಮದಲ್ಲಿ ಭೂತರಾಧನೆ, ನಾಗಾರಾಧನೆಗಳನ್ನು ಮೈಗೂಡಿಸಿ ಸಹಬಾಳ್ವೆ ನಡೆಸುತ್ತಿರುವುದನ್ನು ಕಾಣಬಹುದು. ಇದಕ್ಕೆ ಮುಖ್ಯ ಉದಾಹರಣೆ ಧರ್ಮಸ್ಥಳದ ಮಂಜುನಾಥ ದೇವಾಲಯದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ಡಾ. ವಿರೇಂದ್ರ ಹೆಗ್ಗಡೆಯವರು ಜೈನರಾಗಿ ಶೈವ ಆರಾಧನೆ ನಡೆಸಿಕೊಂಡು ಬರುತ್ತಿರುವುದು ಸೌಹಾರ್ಧತೆಯ ಮಾದರಿಯಾಗಿರುವುದು ಮತ್ತು ಕ್ರೈಸ್ತರು ತುಳುನಾಡಿನ ಮಣ್ಣಿನ ಸಂಸ್ಕೃತಿಯನ್ನು ತಮ್ಮ ಧರ್ಮದೊಂದಿಗೆ ಬೆರೆತು ಶಾಂತಿಯುತವಾದ ಸಹಬಾಳ್ವೆ ನಡೆಸಿದರೆ ಜಿಲ್ಲೆಯಲ್ಲಿ ಸಾವಿರಾರು ವರ್ಷಗಳಷ್ಟು ಕಾಲ ನೆಲೆಸಿ ತನ್ನದೇ ಆದ ವಿಶಿಷ್ಟ ಪರಂಪರೆಯ ಪಂಗಡವನ್ನು, ಸಾಹಸೀ ಸಮುದಾಯವನ್ನು ಹಾಗೂ ತುಳುನಾಡಿನ ಶಾಂತಿ ಮತ್ತು ಸಹಬಾಳ್ವೆಯ ಕೇಂದ್ರವಾಗಿರುವ ಬ್ಯಾರಿ ಜನಾಂಗವು ಜಿಲ್ಲೆಯ ಸೌಹಾರ್ಧತೆಯಲ್ಲಿ ತನ್ನ ವಿಶಿಷ್ಟ ಕೊಡುಗೆಯನ್ನು ನೀಡುತ್ತಾ ಬಂದಿದೆ.

ಜಿಲ್ಲೆಯಲ್ಲಿ ನೆಲೆಸಿರುವ ಬ್ಯಾರಿಗಳ ಇತಿಹಾಸವನ್ನು ಅವಲೋಕಿಸಿದಾಗ ತುಳುನಾಡ, ನಾಡು–ನುಡಿ, ಸಂಸ್ಕೃತಿಗೆ ಅಮೋಘ ಕೊಡುಗೆಗಳನ್ನು ನೀಡುತ್ತಿದೆ ಎನ್ನಬಹುದು. ಇದಕ್ಕೆ ಸ್ಪಷ್ಟ ಉದಾಹರಣಿ ಟಿಪ್ಪು ಸುಲ್ತಾನನ ಕಾಲದಲ್ಲಿ ತುಳು ನಾಡಿನಲ್ಲಿ ಕೀರ್ತಿವಂತರಾಗಿ ಬಾಳಿದ ಬಂಟ್ವಾಳದ ಸಾಧುರಿ ಬ್ಯಾರಿಯ ವೀರಗಾಥೆ ಬ್ರಿಟೀಷರು ಕೊಡಗಿನ ಅರಸರ ಸಹಾಯದಿಂದ ಈ ತುಳುನಾಡನ್ನು ಆಕ್ರಮಣ ಮಾಡಿದಾಗ ಧೈರ್ಯದಿಂದ ಎದುರಿಸಿ ಸಾಧುರಿ ಬ್ಯಾರಿ ಶತ್ರುಗಳ ವಿರುದ್ದವಾಗಿ ವೀರಕಂಭ ಮತ್ತು ಬಂಟ್ವಾಳದ ನದಿತೀರದಲ್ಲಿ ವೀರಾವೇಶದಿಂದ ಹೋರಾಡಿದ್ದು ಹಾಗೂ ಉಡುಪಿ ಉದ್ಯಾವರದ ಸಮೀಪ ಮತ್ತು ದೇವಸ್ಥಾನಗಳಿಗೆ ಬೆಂಕಿ ಇಟ್ಟು ಕೊಳ್ಳೆ ಹೊಡೆದಾಗ ಕುಂಬಳೆ, ಮಂಜೇಶ್ವರ, ಮಂಗಳೂರು, ಮುಲ್ಕಿ ಮುಂತಾದ ಕಡೆಗಳಿಂದ 3000 ಸಾವಿರಕ್ಕಿಂತ ಹೆಚ್ಚು ಬ್ಯಾರಿಗಳು ಒಟ್ಟಾಗಿ ಬ್ರಿಟೀಷರ ವಿರುದ್ಧ ಹೋರಾಡಿದ್ದು, ಮತ್ತು ಬಲಿಷ್ಠ ಬ್ರಿಟಿಷರು ದಾಳಿಯನ್ನು ಎದುರಿಸಲು ವಿಫಲರಾದರು ಕೊನೆಯ ತನಕ ಶತ್ರುಗಳು ವಿರುದ್ದ ಶರಣಾಗದೇ ಇರುವುದು ಹಾಗೂ ಬ್ರಿಟಿಷರು ಸಾಧುರಿ ಬ್ಯಾರಿಯ ತಲೆಗಾಗಿ ಆ ಕಾಲದಲ್ಲಿ ಲಕ್ಷ ರೂಪಾಯಿಯ ಬಹುಮಾನ ಘೋಷಿಸಿದ್ದು ಜಿಲ್ಲೆಯ ಸೌಹಾರ್ದತೆಯಲ್ಲಿ ಬ್ಯಾರಿಗಳ ಪಾತ್ರದ ಕುರಿತಾಗಿ ಸಮಗ್ರ ಮಾಹಿತಿಯನ್ನು ನೀಡುತ್ತದೆ. 1

ಕ್ರಿ.ಶ. 1542 ರಲ್ಲಿ ಜಿಲ್ಲೆಗೆ ಭೇಟಿ ನೀಡಿದ ವಿದೇಶ ಪ್ರವಾಸಿಗರಾದ ಇಬ್ನ್‌ಬತೂತ, ಬರ್ಬೋಸ್, ಮೊದಲಾದವರು ಇಲ್ಲಿನ ವ್ಯಾಪಾರದಲ್ಲಿ (ಬ್ಯಾರಿ) ಮೂರ್‌ಗಳಿಂದ ನಡೆಯುತ್ತಿದ್ದು ಎಂದಿರುವರು ಈ ಪ್ರದೇಶ ಜೈನ ಮನೆತನದ ಕೇಂದ್ರವಾಗಿದ್ದು ಉಳ್ಳಾಲದ ರಾಣಿ ಅಬ್ಬಕ್ಕ ದೇವಿಯ ಸೈನ್ಯದಲ್ಲಿ ಬಹಳಷ್ಟು ಜನ ಮುಸ್ಲಿಂ ಸೈನಿಕರಿದ್ದು ಇವರು ಪೋರ್ಚುಗೀಸರನ್ನು ಎದುರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ ಎಂದಿರುವುದು ಗಮನಾರ್ಹವಗಿದೆ. 2

ತುಳುನಾಡಿನೊಂದಿಗೆ ಅರಬರಿಗೆ ನೇರವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವಿತ್ತು ಕ್ರಿ.ಶ ೭ನೇ ಶತಮಾನದಲ್ಲಿ ಕರಾವಳಿಯಲ್ಲಿ ಮುಸ್ಲಿಮರು ನೆಲೆಸಿದ್ದಾರೆಂದು ಹೋಲ್ಯಾಂಡ್ ತಿಳಿಸಿದಂತೆ ಆ ಕಾಲದ ಕೋಮು ಸಾಮರಸ್ಯಕ್ಕೆ ಉದಾಹರಣೆಯಾಗಿದೆ.3

ಸ್ಟರಕ್‌ನ ಹೇಳಿಕೆಯಂತೆ ವ್ಯಾಪಾರಿಗಳಾಗಿ ಬಂದ ಅರಬ'ರು ಇಲ್ಲೆ ನೆಲೆಸಿ ಸ್ಥಳೀಯ ಸ್ತ್ರೀಯರನ್ನು ವಿವಾಹವಾಗಿ ತಮ್ಮ ಸಂತಾನ'ಗಳನ್ನು ಬೆಳೆಸಿದರು ಎಂದು ಹೇಳಿರುವುದು ಆ ಕಾಲದಲ್ಲಿ ಇಲ್ಲಿನ ಜನರಲ್ಲಿ ಧರ್ಮ ಸಹಿಷ್ನುತೆಗೆ ಮುಖ್ಯ ಆಧಾರವಾಗಿದೆನ್ನಬಹುದು. ತುಳುನಾಡನ್ನು ಆ ಕಾಲದಲ್ಲಿ ಕಾಡುತ್ತಿದ್ದ ಜಾತೀಯತೆ ,ಮೇಲು-ಕೀಳು ವೆಂಬ ವ್ಯತ್ಸಾಸ, ಅಸ್ಪ್ರಶ್ಯತೆ ಕೆಳ ಜಾತಿಯಯವರನ್ನು ಇಸ್ಲಾಂ ಆಕರ್ಷಿಸಿ ಅವರಿಗೆ ಸಮಾನವಾದ, ಅನುಕೂಲಕರವಾದ ಸ್ಥಾನಮಾನ ಸಿಕ್ಕಾಗ ಕರಾವಳಿಯ ಪ್ರಭುತ್ವ ಸಾಧಿಸಿದ ಜೈನ, ಬ್ರಾಹ್ಮಣ ಅರಸರುಗಳು ಇಸ್ಲಾಂ ಧರ್ಮಕ್ಕೆ ತಮ್ಮ ಪ್ರತಿರೋಧ ತೋರದೇ ಇರುವುದು ಆ ಕಾಲದ ಧಾರ್ಮಿಕ ಸಹಿಷ್ಣತೆಗೆ ನಾಂದಿಯಾಗಿದೆ. 4

ತುಳುನಾಡಿನ ಬ್ಯಾರಿಗಳು ಮುಸ್ಲಿಮರಲ್ಲೆ ಬಹುಸಂಖ್ಯಾತರು ಈ ಜನಾಂಗ ಸ್ವತಂತ್ರ ಸಂಸ್ಕೃತಿ ಮತ್ತು ಭಾಷೆಯನ್ನು ಹೊಂದಿದ್ದು ಈ ಜನಾಂಗ ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಯ ಪ್ರಭಾವವನ್ನು ಉಳಿಸಿಕೊಂಡು ಬೆಳೆದು ಬಂದವರೆನ್ನುವುದರ ಕುರಿತಾಗಿ ಪಾಡ್ದನಗಳಲ್ಲಿ ಉಲ್ಲೇಖವಿರುವುದು ಅಕ್ಷರಸಹ ಸತ್ಯವಾಗಿದ್ದು ಇವುಗಳ ಆಧಾರದಲ್ಲಿ ಇಲ್ಲಿನ ಹಿಂದುಗಳು ಮತ್ತು ಮುಸ್ಲಿಮರೆಂದು ಗುರುತಿಸಿಕೊಂಡ ಬ್ಯಾರಿಗಳ ಮಧ್ಯೆ ಉತ್ತಮವಾದ ಸಾಮಾಜಿಕವಾದ ದೀರ್ಘ ಸಂಬಂಧಗಳ'ತ್ತೆಂಬುದರ ಕುರಿತಾಗಿ ಪಾಡ್ದ'ನಗಳು ಮಾಹಿತಿ ನೀಡುವುದು ಕೋಮು ಸಾಮರಸ್ಯ ಇನ್ನೊಂದು ಸಾಕ್ಷಿಯಾಗಿದೆ.5

ಪಾಡ್ದನಗಳು ತಿಳಿಸುವಂತೆ ಬ್ಯಾರಿಗಳು ಹಿಂದೂ ಸಹೋದರರೊಂದಿಗೆ ಧಾರ್ಮಿಕವಾಗಿ ಬೆರೆಯುತ್ತಿದ್ದುದರ ಕುರಿತಾಗಿ ಪ್ರಮುಖ ಪಾಡ್ಡ'ನಗಳಾದ ಬೊಬ್ಬರ್ಯ ಪಾಡ್ದನ, ಜುಮಾದಿ ದೈವದ ಪಾಡ್ದಣ, 'ಅತ್ತಾವರ ದೈಯಂ' ಪಾಡ್ದನವು ವಿವರಿಸುತ್ತದೆ. 'ಆಲಿ'ವೆಂಬ ಮುಸ್ಲಿಂ ನಾಯಕನನ್ನು ಪಾಡ್ದನಗಳು ದೈವ ಇಲ್ಲವೆ ದೈವಿಕ ಪುರುಷನೆಂದು ಪರಿಗಣಿಸಿದ್ದು ಬರ್ಬಯ್ಯನು ಇಲ್ಲವೆ 'ಬಾವು ಬ್ಯಾರಿ'ಯನ್ನು ಮೀನು'ಗಾರರ ಸಂಕಷ್ಟದ ಸಮಯದಲ್ಲಿ ಸಹಾಯ ಹಸ್ತವನ್ನು ನೀಡುವ ದೈವವೆಂದು ನಂಬಲಾಗಿದೆ.

ಜಾತಿ ಬ್ಯಾರಿಗಳಿಗೆ ಬ್ರಹ್ಮನ ದೇವಸ್ಥಾನ ಮೋಗಸಾಲೆಗೆ ಪ್ರವೇಶಿಸಿ ಬಾಗಿಲು ಮುಟ್ಟಿ ಇಷ್ಟಾರ್ಥವನ್ನು ಬೇಡಲು ಅವಕಾಶ ನೀಡಿರುವುದು ತುಳುನಾಡಿನ ಹಿಂದೂಗಳು ಬ್ಯಾರಿಗಳಿಗೆ ನಿಡಿದ "ಗೌರವದ ಸಂಕೇತವಾಗಿದೆಂದು ಬಿ.ಎ ಸಾಲೆತ್ತೂರು ಅಭಿಪ್ರಾಯಪಟ್ಟಿದ್ದಾರೆ. 'ಅತ್ತಾವರ ಧೈಯಂ' ಈ ಪಾಡ್ದನದಲ್ಲಿ ಪಾಣೆಮಂಗಳೂರಿನ ಬಂಗರಾಜನ ಕಾಲದಲ್ಲಿ ಮುಸ್ಲಿಮರ ಸಾಮಜಿಕ ಅಂತಸ್ತಿನ ಕುರಿತಾದ ಚಿತ್ರಣವನ್ನು ನೀಡಿರುವುದು ನಿರ್ದಿಷ್ಟವಾದ ಕಾಲದಲ್ಲಿ ತುಳುನಾಡು ನಾಡಿನ ಹಿಂದುಗಳು ಮತ್ತು ಬ್ಯಾರಿಗಳ ಕೋಮು ಸಾಮರಸ್ಯವನ್ನು ಸಾರುವ ಪ್ರತೀಕವಾಗಿದೆ. 6

ತುಳುನಾಡಿನಲ್ಲಿ ವ್ಯಾಪಾರವನ್ನೇ ಮುಖ್ಯ ಕಸುಬನ್ನಾಗಿ ಸುಮಾರು ವರ್ಷಗಳಷ್ಟು ಕಾಲ ಮುಂದುವರಿಸಿದ ಬ್ಯಾರಿಗಳಿಗೆ ಇಲ್ಲಿನ ಹಿಂದೂಗಳು ಕಸುಬುವಿನ ಆಧಾರದ ಮೇಲೆ ಈ ಜನರನ್ನು 'ಬ್ಯಾರಿ'ಗಳೆಂದು ಕರೆದಿರುವುದು ಕೋಮು ಸಾಮರಸ್ಯಕ್ಕೆ ಇನ್ನೊಂದು ಮುಖ್ಯ ಕಾಣಿಕೆಯಾಗಿದೆ. ತುಳುನಾಡಿನಲ್ಲಿ ಮೀನುಗಾರಿಕೆಯಂತಹ ವ್ಯಾಪಾರಗಳು ಕೇವಲ ಕೆಳಜಾತಿಯವರಿಗೆ ವಿಲ್ಲಿಸಲಾಗಿದ್ದವು ಇಂತಹ ವ್ಯಾಪಾರವನ್ನು ಬ್ಯಾರಿಗಳು ಕೈಗೆತ್ತಿಕೊಂಡಾಗ ತುಳುನಾಡಿನ ಜನತೆ ಅವರಿಗೆ ಸಹಕಾರ ನೀಡಿರುವುದು ಹಾಗೂ ತುಳುನಾಡಿನ ಪ್ರಮುಖ ಪ್ರದೇಶಗಳಲ್ಲಿ ದೋಣಿಗಾರರಾಗಿ, ಮಾಲಕರಾಗಿ ಈ ಜಿಲ್ಲೆಯ ಇತರ ಸಮುದಾಯದವರೊಂದಿಗೆ ಸಾಮರಸ್ಯದ ಜೀವನ್ನವು ನಡೆಸಿಕೊಂಡು ಬಂದಿರುವುದು ಗಮನಾರ್ಹನವಾಗಿದೆ. 7

ಜಿಲ್ಲೆಯ ಪ್ರಮುಖ ನಗರಗಳಲ್ಲಿನ ವಾರದ ಸಂತೆಗಳಲ್ಲಿ ಬ್ಯಾರಿಗಳು ತರಕಾರಿ, ದಾನ್ಯ, ಮೀನು ಮುಂತಾದ ಪ್ರಮುಖ ವ್ಯಾಪಾರದ ವ್ಯಾಪಾರಿಗಳಾಗಿ ಭಾಗವಹಿ'ಸುತ್ತಿರುವುದು ಮತ್ತು ಪ್ರಮುಖ ದೇವಸ್ಥಾನ ಹಾಗೂ ಭೂತ ಸ್ಥಾನಗಳಲ್ಲಿ ನಡೆಯುವ ಜಾತ್ರೆ ಮತ್ತು ಧಾರ್ಮಿಕ ಕಾರ್ಯಕ್ರಮಗಳ ಸಂದರ್ಭದಲ್ಲಿ ಬ್ಯಾರಿಗಳು ಭಾಗವಹಿಸುವುದು ಜಿಲ್ಲೆಯ ಕೋಮು ಸಾಮರಸ್ಯಕ್ಕೆ ಪ್ರಮುಖ ನಿದರ್ಶನಗಳಾಗಿವೆ. 8

ಜಿಲ್ಲೆಯ ಪ್ರಸಿದ್ಧ ಜಾನುವಾರು ಮೇಳಗಳಲ್ಲಿ ಪಾಲ್ಗೊಂಡು ಭಾರೀ ಸಂಖ್ಯೆಯ ಜಾನುವಾರುಗಳನ್ನು ಖರೀದಿಸಿ ತಮ್ಮ ವ್ಯಾಪಾರದ ಕೌಶಲ್ಯವನ್ನು ಪ್ರದರ್ಶಿಸಿಸುತ್ತಿರುವುದು ತುಳುನಾಡಿನ ಸೌಹರ್ದತೆಗೆ ಉತ್ತಮವಾದ ಉದಾಹರಣೆಗಳಾಗಿವೆ. ಜಿಲ್ಲೆಯ ಪ್ರಮುಖ ವಾಣಿಜ್ಯದ ಕೇಂದ್ರ ಬಿಂದುವಾದ ಬಟ್ಟೆ ವ್ಯಾಪಾರ, ಹೋಟೆಲು ಉದ್ಯಮಗಳಲ್ಲಿ ಬ್ಯಾರಿಗಳು ಗುರುತಿಸಿಕೊಂಡಿದ್ದು ಜಿಲ್ಲೆಯ ಎಲ್ಲಾ ಧರ್ಮಿಯರು ಮತ ಭೇದವಿಲ್ಲದೆ ಪಾಲ್ಗೊಳಿತಿರುವುದು ಜಿಲ್ಲೆಯ ಸೌಹರ್ದತೆಗೆ ಉತ್ತಮವಾದ ನಿದರ್ಶನವಾಗಿದೆ. ಮಲಬಾರಿನ ಮಾಪ್ಲಾಗಳಿಗಿಂತ ಭಿನ್ನವಾದ ಹಲವಾರು ವಿಚಾರಗಳು ಬ್ಯಾರಿಗಳಲ್ಲಿವೆ.

ತುಳುನಾಡಿನ ಬಂಟರ 'ಬಳಿ' ಪದ್ಧತಿಯನ್ನು ಹೋಲುವ 'ಇಲ್ಲಂ' ಪದ್ಧತಿ ಬ್ಯಾರಿಗಳಲ್ಲಿತ್ತು ಇದು ಮಾತೃ ಮೂಲ ಕುಟುಂಬ ವ್ಯವಸ್ಥೆಯಾದ್ದಗಿದ್ದು ಹಲವಾರು ಇಲ್ಲಂಗಳಲಿದ್ದು ಒಂದೇ ಇಸ್ಲಾಂ ನಲ್ಲಿ ಮದುವೆಯಾಗುವಂತಿರಲಿಲ್ಲ ಇಸ್ಲಾಂಗಳಲ್ಲು ಸ್ಥಾನಮಾನಗಳ ಏರುಪೇರುಗಳಿದ್ದು ಕೆಲವು ಉನ್ನತ ಮಟ್ಟದ್ದಾಗಿದ್ದರೆ ಕೆಲವು ಕೆಳಮಟ್ಟದ್ದಾಗಿತ್ತು. 'ಮೆಹರ್' ನಿರ್ಧಾರದಲ್ಲಿ ಈ ಸ್ಥಾನಮಾನ ಸೂಚಿತವಾಗುತ್ತಿದ್ದವು. ಈ ರೀತಿಯ ಸಂಸ್ಕೃತಿ ಇಸ್ಲಾಂ ಧರ್ಮದಲ್ಲಿದ್ದ ಆಚಾರವಾಗಿದ್ದು. ಇವು ಸ್ಥಳೀಯ ಪ್ರಭಾವವನ್ನು ತೋರಿಸುತ್ತದೆ.9

ತುಳುನಾಡಿನ ಹೆಮ್ಮೆಯ ರಾಣಿ ಅಬ್ಬಕ್ಕಳ ಸೈನ್ಯದಲ್ಲಿ ಸ್ಥಳೀಯ ಬ್ಯಾರಿಗಳು ಸೈನಿಕರಾಗಿ ದುಡಿಯುತ್ತಿದ್ದು 'ಭಾವ' ಎಂಬ ಪದ' ಒಂದು ಸೇನಾ ಶಬ್ದವಾಗಿತ್ತು ಬೊಬ್ಬರ್ಯ ದೈವ 'ಬಾವುಬ್ಯಾರಿ' ಎಂಬ ನಂಬಿಕೆ ರೂಡಿಯಲ್ಲಲಿದೆ ಆದುದರಿಂದ 'ಭಾವ' ಎಂಬ ಹೆಸರು ಇಂದಿಗೂ ಬ್ಯಾರಿ ಸಮುದಾಯದಲ್ಲಿ ಕಂಡು ಬರುತ್ತದೆ. 'ಎಂದ್ರೆ ಬಾವ' (ಏನುಮರಾಯ) ಎಂಬಂತೆ ಜನಜನಿತವಾಗಿದೆ ಇವೆಲ್ಲಾ ರಾಣಿ ಅಬ್ಬಕ್ಕ ಮತ್ತು ಜಿಲ್ಲೆಯ ಬ್ಯಾರಿಗಳ ಮದ್ಯೆ ಇದ್ದ ಅನ್ಯೋನ್ಯತೆಗೆ ಸಾಕ್ಷಿಯಾಗಿದೆನ್ನಬಹುದು. 10

ಉಳ್ಳಾಲ ದರ್ಗಾಕ್ಕೆ ಹಿಂದಿನ ಕಾಲದಿಂದಲೂ ಹಬ್ಬ ಹರಿದಿನಗಳ ಒಂದು ಸಮಯದಲ್ಲಿ ಹೊಸ ಅಕ್ಕಿ (ಸುಗ್ಗಿಯ) ದಿನದಂದು ಹಿಂದೂ ಭಾಂಧವರು ಸಂತರ ಮೇಲಿನ ಗೌರವದಿಂದ ದರ್ಗಾಕ್ಕೆ ಹರಕೆ ರೂಪದಲ್ಲಿ ಅಕ್ಕಿ ಮತ್ತು ಇತರ ವಸ್ತು ರೂಪದ ಕಾಣಿಕೆಯನ್ನು ನೀಡುತ್ತಿದ್ದರು ಈ ರೀತಿ ಉಳ್ಳಾಲ ಇಂದಿಗೂ ಕೋಮು ಸಾಮರಸ್ಯದ ಕೇಂದ್ರವಾಗಿದ್ದು ಇಲ್ಲಿನ ಸ್ಥಳೀಯ ಎಲ್ಲಾ ಮತ ಬಾಂಧವರು ಗೌರವ ಆದಾರಗಳನ್ನು ನೀಡುದರ ಮೂಲಕ ಕಾಣಿಕೆಯನ್ನು ಸಲ್ಲಿಸುತ್ತಿರುವುದು ಹಿಂದಿನ ಕಾಲದಿಂದ ನಡೆದು ಬಂದಿರುವ ಪದ್ಧತಿ ಆಗಿದೆ. 11

ಉಳ್ಳಾಲ ದರ್ಗಾದ ಊರುಸಿನ ಸಮಯದಲ್ಲಿ ಮಂಗಳೂರಿನ ಗೋಕರ್ಣನಾಥೇಶ್ವರ ದೇವಾಲಯದ ಮುಖ್ಯಾಸ್ಥರಾಗಿರುವ ರಾಜಕೀಯ ಮುಖಂಡ ಜನಾರ್ಧನ ಪೂಜಾರಿಯವರು ಭಾಗವಹಿಸಿ ೧,೦೦೦ ಮುಡಿ ಅಕ್ಕಿ ಕಾಣಿಕೆಯಾಗಿ ನೀಡಿರುವುದು ಮಾತ್ರವಲ್ಲದೆ ಸ್ಥಳೀಯ ಕೆಳವರ್ಗದ ಮೊಗವೀರ ಕುಟುಂಬದವರು ದರ್ಗಾಕ್ಕೆ ಗೌರವ ಕಾಣಿಕೆಯನ್ನು ಸಲ್ಲಿಸಿ ಭೇಟಿ ನೀಡುತ್ತಿರುವುದು ಸಾಮಾನ್ಯವಾಗಿದೆ. 12

ಉಳ್ಳಾಲ ಊರುಸಿನ ಸಮಯದಲ್ಲಿ ನಡೆಯುವ ಸಂದಲ್ ಮೆರವಣಿಗೆಯ ಹಿಂದೆ ಕಾಣಿಸುವ ಕೊಲ್‌ಕಲಿ(ಕೋಲಾಟ), ತಾಲೀಮು ಪದರ್ಶನಗಳು ಸ್ಥಳೀಯ ಪ್ರಭಾವದಿಮದ ಬಂದಿರುವಂತದು ಈ ರೀತಿಯ ಪ್ರದರ್ಶನದ ಸಮಯಗಳಲ್ಲಿ ಹಾಗೂ ಮೈಸೂರು ದಸರಾ ಉತ್ಸವದಲ್ಲಿ ಕಾಣಲು ಸಾಧ್ಯವಾಗಿದೆ. 13

ಊರುಸ್ ಆಚರಣೆಯ ಸಂದರ್ಭದಲ್ಲಿ ಕಾಣುವ ಸಂಗೀತ ಸುಡುಮದ್ದು ಹೂವಿನ ಅಲಂಕಾರ, ಮೆರವಣಿಗೆ ಇವುಗಳು ಹಿಂದೂ ಮುಸ್ಲಿಂ ಭವೈಕ್ಯದ ಸಂಕೇತವಾಗಿದ್ದು ಸ್ಂದಲ್ ಮೆರವಣಿಗೆಯಲ್ಲಿ ಹಾಗೂ ಮನೋರಂಜನೆ. ತಾಲೀಮು ಪ್ರದರ್ಶನದಲ್ಲಿ ಉಭಯ ಧರ್ಮಿಯರು ಭಾಗವಹಿಸುತ್ತಿರುವುದು ಹಾಗೂ ಉಳ್ಳಾಲದ ಊರುಸ್ ಸಮಾರಂಭ ಇಂದಿಗೂ ಹಿಂದಿನ ಕಾಲದ ನಾಡಹಬ್ಬದ ಮಾದರಿಯಲ್ಲೆ ನಡೆದುಕೊಂಡು ಬರುತ್ತಿರುವುದು ಕೋಮು ಸೌಹಾರ್ದದ ಸಂಕೇತವಾಗಿದೆ. 14

ದರ್ಗಾಕ್ಕೆ ಭೇಟಿನೀಡುವ ಅನ್ಯ ಧರ್ಮದವರಲ್ಲಿ ಕೇರಳದ ಒಬ್ಬ ಕ್ರಿಶ್ಚಿಯನ್ ಜ್ಯೋತಿಷಿ ಸಂದರ್ಶನ ನೀಡಿರುದಲ್ಲಾದೆ ಕೇರಳದ "ಖ್ಯಾತಗಾಯಕರಾದ ಜೇಸುದಾಸ್‌ರವರನ್ನು ಕರೆದುಕೊಂಡು ಬಂದಿದ್ದರು, ಶಬರಿಮಲೆ ಹೋಗುವ ಯಾತ್ರಾರ್ಥಿಗಳು ಪ್ರತಿವರ್ಷ ದರ್ಗಾಕ್ಕೆ ಸಂದರ್ಶನ ನೀಡಿ ಹರಕೆ ಸಲ್ಲಿಸಿ ಪ್ರಾರ್ಥನೆ ಮಾಡಿ ತಮ್ಮ ಯಾತ್ರೆಯನ್ನು ಮುಂದುವರಿಸುವುದು ಇಂದಿಗೂ ರೂಢಿಯಲ್ಲಿದೆ. 15

ಈ ರೀತಿ ದರ್ಗಾಕ್ಕೆ ಬರುವ ಎಲ್ಲಾ ಧರ್ಮಿಯ ಜನರನ್ನು ದರ್ಗಾ ಪ್ರವೇಶ, ಪ್ರಾರ್ಥನೆಗೆ ಮುಕ್ತ ಆವಕಾಶ ಕಲ್ಪಿಸಲಾಗಿದೆ. ದರ್ಗಾಕ್ಕೆ ಬರುವ ಎಲ್ಲಾ ಯಾತ್ರಾರ್ಥಿಗಳಿಗೆ ಊಟ, ವಸತಿ, ಸೌಕರ್ಯ ಮಾಡಿಕೊಡುವ ವ್ಯವಸ್ಥೆಯು ಇದೆ. ಇಲ್ಲಿನ ಮೊಗವೀರ ಜನರ ಮುಖ್ಯ ಉದ್ಯಮ ಮೀನುಗಾರಿಕೆಯಾಗಿದ್ದು ಬ್ಯಾರಿಗಳು ಇವರ ಜೊತೆ ಸೌಹರ್ದತೆಯಿಂದ ಇದ್ದು ಬೇಧ ಭಾವವಿಲ್ಲದೆ ಈ ಉದ್ದಿಮೆಯಲ್ಲಿ ಪಾಲ್ಗೊಳುತ್ತಿರುವುದು ಗಮನಾರ್ಹವಾಗಿದೆ.16

ತುಳುನಾಡಿನ ಜನಪದದಲ್ಲಿ ಮೂಲಭೂತವಾಗಿ ಮೂಡಿಬಂದ ನಂಬಿಕೆ ಹಾಗೂ ಧರ್ಮವಾಗಿ ಇಲ್ಲಿನಭೂತರಾಧನೆ, ನಾಗರಾಧನೆ, ದೇವಸ್ಥಾನ ಹಾಗೂ ನಾಗ ಸನ್ನಿಧಿಗೆ ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಎಲ್ಲಾ ಧರ್ಮಿಯರು ಭೇಟಿ ನೀಡಿ ಹರಕೆ, ಕಾಣಿಕೆಯನ್ನು ಸಲ್ಲಿಸುತ್ತಿರುವುದು ಜಿಲ್ಲೆಯ ಕೋಮು ಸಾಮರಸ್ಯಕ್ಕೆ ಉತ್ತಮ ನಿದರ್ಶನವಾಗಿದೆ.17

ಉಚ್ಚಿಲ ಮಸೀದಿಯ ದಕ್ಷಿಣ ಭಾಗದಿಂದ ಅಡ್ಕದ ಭಗವತೀ ದೈವ ಬರುವ ಸಂಪ್ರದಾಯವಿದ್ದು ಮಸೀದಿಯ ಹತ್ತಿರ ಬಂದಾಗ ದೈವವು ಮಸೀದಿಗೆ ಮರ್ಯಾದೆ ಕೊಟ್ಟು ಮುಂದುವರಿಯುವುದು ಹಿಂದಿನ ಕಾಲದಿಂದಲೂ ಬಂದಿರುವ ವಾಡಿಕೆಯಾಗಿದೆ. 18

ಸುಡು ಬೇಸಿಗೆಯ ಕಾಲದಲ್ಲಿ ಕುಡಿಯುವ ನೀರಿಗೆ ಹಾಹಾಕಾರವಾದ ಸಂದರ್ಭದಲ್ಲಿ ಜಾತಿ, ಮತ, ಭೇದವಿಲ್ಲದೆ, ಉಳ್ಳಾಲ, ಪೆರ್ಮನ್ನೂರು, ಮುನ್ನೂರು ಹಾಗೂ ಸೋಮೇಶ್ವರ ಪ್ರದೇಶಗಳಿಗೆ ಉಳ್ಳಾಲ ದರ್ಗಾದ ವತಿಯಿಂದ ನೀರು ಸರಬರಾಜು ಮಾಡುವ ವ್ಯವಸ್ಥೆಯಿದೆ. ಪ್ರತಿವರ್ಷ ನಡೆಯುವ ಈ ಕಾರ್ಯಕ್ರಮ ಉತ್ತಮ ಸ್ಪಂದನವಾಗಿದೆ.

ಜಿಲ್ಲೆಯಲ್ಲಿರುವ ಪ್ರಮುಖ ಶಾಲಾ-ಕಾಲೇಜು ಶಿಕ್ಷಣ ಸಂಸ್ಥೆಗಳು ಬ್ಯಾರಿಗಳ ಆಧೀನದಲ್ಲಿದ್ದು ಇಲ್ಲಿ ವರ್ಷದ ಕ್ಯಾಲೆಂಡರನ್ನು ತಯಾರಿಸುವಾಗ ಹಿಂದೂ- ಮುಸ್ಲಿಂ ಕ್ರಿಶ್ಚಿಯನ್ ಹೀಗೆ ಎಲ್ಲ ಧರ್ಮದ ಹಬ್ಬ ಹರಿದಿನಗಳಂದು ರಜೆಯನ್ನು ನೀಡಿ ಎಲ್ಲ ಸಮುದಾಯದವರಿಗೆ ಹಬ್ಬ ಹರಿದಿನಗಳಲ್ಲಿ ಪಾಲ್ಗೊಳ್ಳಲು ಅವಕಾಶ ನೀಡಿರುವುದು ಧಾರ್ಮಿಕ ಸಹಬಾಳ್ವೆಯನ್ನು ಎತ್ತಿ ಹಿಡಿಯುತ್ತದೆ.19

ಜನಸಂಖ್ಯೆ ಹೆಚ್ಚಿದಂತೆ ಬ್ಯಾರಿ ಸಮುದಾಯವು ಬಡತನದಿಂದ ಪಾರಾಗಲು ವಿವಿಧ ರೀತಿಯ ವ್ಯಕ್ತಿಗಳನ್ನು ಮಾಡಲು ಆರಂಭಿಸಿದ್ದು ಶೈಕ್ಷಣಿಕ ರಂಗದಿಂದ ವಂಚಿತರಾಗಿದ್ದ ಈ ಜನಾಂಗ ತುಳುನಾಡಿನ ಸಾಮಾಜಿಕ ಸ್ವಾಸ್ಥ್ಯ ಮತ್ತು ಸೌಹರ್ದದ ಬಾಳ್ವೆಗೆ ಹಾಗೂ ಸ್ಥಳೀಯ ಜನರೊಂದಿಗೆ ವಿಶ್ವಾಸ, ನಂಬಿಕೆಗಳಗೆ ಪಾತ್ರರಾಗಿದ್ದು ೧೯೫೦, ೧೯೬೦ ರ ಅವಧಿಯಲ್ಲಿ ಕೃಷಿ, ಸಂಸ್ಕೃತಿಯನ್ನು ಅವಲಂಬಿಸಿದ ಹಿಂದೂ ಬಾಂಧವರು ಬ್ಯಾರಿಗಳು ಪರಸ್ಪರ ಧಣಿ ಒಕ್ಕಲುಗಳಾಗಿ ಉತ್ತಮ ಬಾಂದವ್ಯದಲ್ಲಿದ್ದರು ಶ್ರೀಮಂತ ಬ್ಯಾರಿಗಳು, ದೈವ, ದೇವಸ್ಥಾನಗಳಗೆ ತಮ್ಮ ಧಾರ್ಮಿಕ ನಂಬಿಕೆಗಳಗೆ ಪೆಟ್ಟು ಬೀಳದ ರೀತಿಯಲ್ಲಿ ನಡೆದುಕೊಳ್ಳುತ್ತಿರುವುದು ಸ್ನೇಹ ಸೌಹಾರ್ದದ ಕುರುಹೇ ಆಗಿದೆ. ಈ ಜನ ಇಂದಿಗೂ ದೈವ, ದೇವಸ್ಥಾನಗಳ ನೇಮ ಜಾತ್ರೆಯಲ್ಲಿ ವಿವಿಧ ರೀತಿಯ ಸಂತೆ ವ್ಯಾಪಾರವನ್ನು ಮಾಡಿತ್ತಿದ್ದು, ಆರ್ಯುವೇದ ತಜ್ಞರು, ಹೋಮಿಯೊಪತಿ, ಪ್ರಸಿದ್ಧ ಯುನಾನಿ ವೈದ್ಯರು ಈ ಸಮುದಾಯದಲ್ಲಿದ್ದು ಉತ್ತಮ ಬಾಂದವ್ಯವನ್ನು ಪಡೆದುಕೊಂಡಿದ್ದಾರೆ, 20

ಬ್ಯಾರಿ ಸಮುದಾಯ ಹಲವಾರು ವೈಶಿಷ್ಟಗಳನ್ನೊಳಗೊಂಡ ಸಮುದಾಯವಾಗಿದ್ದು ಆದರೆ ಸ್ಥಳೀಯ ಜನಸಮುದಾಯದೊಡನೆ ಅನ್ಯೋನ್ಯತೆಯಿಂದ ಹಿಂದಿನ ಕಾಲದಿಂದಲೂ ಬಾಳುತ್ತಿದ್ದು ಇದಕ್ಕೆ ನಿದರ್ಶನವಾಗಿ ತುಳುನಾಡಿನ ಪ್ರಾಚೀನ ಪಾಡ್ದನಗಳಲ್ಲಿ ಇಂದೀನವರೆಗೂ ಬ್ಯಾರಿಗಳಗೂ ಸ್ಥಳೀಯ- ಜನರಿಗೂ ಇರುವಂತಹ ಆತ್ಮಿಯ ಸೌಹರ್ದತೆ ತುಳುನಾಡಿನ ಚರಿತ್ರೆಯ ಉದ್ದಕ್ಕೂ ಕಂಡು ಬರುತ್ತದೆ ಹಿಂದೂ- ಮುಸ್ಲಿಂ ಐಕ್ಯದ,' ನಿಕಟ ಬಾಂಧವ್ಯದ ಅತ್ಯುತ್ತಮ ನಿದರ್ಶನ ಬ್ಯಾರಿ ಜನಾಂಗದಲ್ಲಿವೆ. ಇದಕ್ಕೆ ಮುಖ್ಯ ಉದಾಹರಣೆ ಬ್ಯಾರಿ ನಾವಿಕನಾಗಿದ್ದ ಬಪ್ಪ ಬ್ಯಾರಿಯಿಂದ ನಿರ್ಮಿಸಲ್ಪಟ್ಟ ಮುಲ್ಕಿಯ ಬಪ್ಪನಾಡು ದೇವಸ್ಥಾನ ಇಂದಿಗೂ ಇದು ಕೋಮು ಬಾಂಧವ್ಯದ ಸಂಕೇತವಾಗಿ ಇಡೀ ದೇಶಕ್ಕೆ ಮಾದರಿಯಾಗಿದೆ.21

ಮಂಗಳೂರಿನ ಖಾನ್ ಬಹದ್ದೂರ್ ಅಬೂಬಕರ್ ಹಾಜಿಯವರು ಬ್ರಿಟೀಷರಿಂದ ಗೌರವಿಸಲ್ಪಟ್ಟ ನ್ಯಾಯ ನಿಷ್ಠೆಗೆ ಹೆಸರಾದ, ಪ್ರಭಾವಿ ಗಣ್ಯ ವ್ಯಕ್ತಿ ಇವರು ಕದ್ರಿ ದೇವಾಲಯದ ಕೆರೆಯ ನೀರಿನ ಬಗ್ಗೆ ಉಂಟಾದ ವಿವಾದವನ್ನು ಯಾವ ಕೋಮಿನ ಜನರಿಗೂ ನೋವಾಗದಂತೆ ವಿವಾದವನ್ನು ಬಗೆಹರಿಸಿ ತನ್ನ ಜಾಣ್ಮೆಯನ್ನು ಪ್ರದರ್ಶಿಸಿದ ಇವರಿಗೆ ಬ್ರಿಟಿಷರು ಕೊಟ್ಟ ಬಿರುದು, 'ಖಾನ್ ಬಹದ್ದೂರ್' ಇದೇ ರೀತಿ ಮಂಜೇಶ್ವರದ ಮಮ್ಮಿ ಸೂಫಿ ಬ್ಯಾರಿ, ಮುಲ್ಕಿಯ ಬಪ್ಪಬ್ಯಾರಿ, ಮೊಗ್ರಾಲಿನ ಕುಞ್ಞಪಳ್ಳಿಬ್ಯಾರಿ ಮುಖ್ಯವಾದ ಪ್ರಮುಖ ವ್ಯಕ್ತಿಗಳು ತುಳುನಾಡಿನ ಚರಿತ್ರೆಯಲ್ಲಿ ಕೋಮುಸಾಮರಸ್ಯದ ಪ್ರಮುಖ ವ್ಯಕ್ತಿತ್ವಗಳಾಗಿದ್ದಾರೆ.

ಜಿಲ್ಲೆಯ ಕೋಮು ಸಾಮರಸ್ಯದ ಇನ್ನೂ ಹಲವು ಮೂಲಗಳನ್ನು ನೋಡುವುದಾ'ದರೆ ಕೆಲವು ಹಳ್ಳಿ ಪ್ರದೇಶದದಲ್ಲಿ ಸಿಗುವ ಅಂಬಟೆ ಹಣ್ಣು, ಮಾವು, ಹಲಸು ಮುಂತಾದ ಹಣ್ಣುಗಳನ್ನು ನೆರೆ-ಹೊರೆಯ ಎಲ್ಲಾ ಮನೆಗಳಿಗೆ ಹಂಚುವಂತದ್ದು. ಮಳೆಗಾಲಕ್ಕಾಗಿ ಇವುಗಳನ್ನು ಒಂದು ಹಂಡೆ'ಯಲ್ಲಿ 'ಉಪ್ಪು ನೀರು' ಹಾಕುವಂತದು ಮಳೆಗಾಲದ ಸಂದರ್ಭದಲ್ಲಿ ಇದನ್ನು ಪರಸ್ಪರ ಹಂಚಿಕೊಂಡು ಉಪಯೋಗಿಸುವುದು ಇವೆಲ್ಲ ಕೋಮು ಸಾಮರಸ್ಯದ ನಿದರ್ಶನಗಳು.22

ತಮ್ಮ ಮನೆಯಲ್ಲಿ ಹಸು, ಆಡುಗಳಿದ್ದರೆ ನೆರೆ-ಹೊರೆಯವರ ಅಕ್ಕಿ ತೊಳೆದ ಅಕ್ಕಚ್ಚನ್ನು ತಂದು ಹಸುಗಳಿಗೆ ಕುಡಿಸುವುದು, ಸಾಕು ಪ್ರಾಣಿಗಳು ಅನ್ಯ ಧರ್ಮಿಯರ ಮನೆಯಂಗಳಕ್ಕೆ ಹೋಗಿ ಹೊಟ್ಟೆ ತುಂಬಿಸುವುದು ಕೋಳಿಯನ್ನು ಕಾವು ಕೊಡಲು ಕುಳ್ಳಿರಿಸಲು ನೆರೆ ಹೊರೆಯವರ ಮನೆಯಲ್ಲಿ ತೂಗು ಹಾಕಿ ಬರುವುದು ಇವೆಲ್ಲಾ ಅಂತರ್ ಸಂಬಂಧಗಳಾದ ತಾಯಿ ಮಕ್ಕಳು ಅಣ್ಣ ತಮ್ಮಂದಿರು, ಅಕ್ಕ-ತಂಗಿಯಂದಿರುವೆಂಬ ಸಂಬಂಧಗಳ ಕೊಂಡಿಯಾಗಿದೆ. 23

ಮಸೀದಿ, ದರ್ಗಾ, ಭೂತ ಸ್ಥಾನಗಳಿಗೆ ಹರಕೆ ಕೊಡುವುದು, ಸೀಮಂತ, ಮಗುವಿಗೆ ತೊಟ್ಟಿಲು ಹಾಕುವ ಕಾರ್ಯಕ್ರಮ, ಮಗುವಿನ ತಲೆಕೂದಲು (ಕಜಂಬು) ತೆಗೆಯುವುದು ಮರಣ ಹೊಂದಿರುವರಿಗೆ ಸ್ಮರಣೆ ಮಾಡುವ ಕಾರ್ಯಕ್ರಮ  ಇವೆಲ್ಲಾ ಸ್ಥಳೀಯ ತುಳು ಸಂಸ್ಕೃತಿಯಿಂದಾದ ಪ್ರಭಾವವಾಗಿದೆ.24

ಸಂತೋಷದ ಸಂದಭರ್ದಗಳಲ್ಲಿ ನೆರೆ ಹೊರೆಯ ಮನೆಯವರಿಗೆ ಸಿಹಿತಿಂಡಿ, ಹಣ್ಣು- ಹಂಪಲು, ಎಲೆ ಅಡಿಕೆ, ನೀಡುವುದು ಕೊಂಡುಕೊಳ್ಳುವುದು ಇವುಗಳು ಜಿಲ್ಲೆಯ ಸೌಹರ್ದತೆಯ ಕೊಂಡಿಯಾಗಿದೆ. ಗರ್ಭಿಣಿ ಹೆಣ್ಣು ಗಂಡನ ಮನೆಯಲ್ಲಿ ಸೀಮಂತವಾಗಿ  ತವರುಮನೆಗೆ ಬರುವ ಸಂದಭಥದಲ್ಲಿ ನೆರೆಯ ತುಳು ಹೆಂಗಸರು ಹರಸಿ, ಹರಕೆ ಹೊತ್ತು ಕಣ್ಣೀರು ಇಡುವಂತಹದ್ದು, ಹೊಸಅಕ್ಕಿ (ಸುಗ್ಗಿ) ಯ ದಿನದಂದು ತುಳುವರು ಮತ್ತು ಬ್ಯಾರಿಗಳ ಮನೆಯಲ್ಲಿ ಒಂದೇ ರೀತಿಯ ಅಡುಗೆ, ಸಂಪ್ರದಾಯಗಳು ಊರಲ್ಲಿರುವ ದೇವಸ್ಥಾನದ ವರ್ಷಾವಧಿ ಜಾತ್ರೆ ಹಾಗೂ ಮಸೀದಿಯ ಕಾರ್ಯಕ್ರಮ ಊರುಸ್ ಸಮಾರಂಭಗಳು ಇಡೀ ಊರಿನ ನಾಡ ಹಬ್ಬವಾಗಿ ಎಲ್ಲಾ ಧರ್ಮಿಯ ಜನ ಪಾಲ್ಗೊಂಡು ಆಚರಿಸುವುದು ಸಾಮಾನ್ಯವಾಗಿದೆ.25

ಊರ ದೇವಸ್ಥಾನ, ದರ್ಗಾಗಳಿಗೆ ಹೊರಕಾಣಿಕೆಯನ್ನು ಕಳುಹಿಸುವಂತದು' ಹರಕೆ ಡಬ್ಬಿಗಳನ್ನು ತಂದು ಹಣ ಹಾಕಿ ಜಾತ್ರೆ ಮತ್ತು ಊರುಸಿನ ಸಂದರ್ಭದಲ್ಲಿ ಅವುಗಳನ್ನು ಹಿಂದಿರುಗಿಸುವಂತದ್ದು ದರ್ಗಾಗಳು ಮತ್ತು ದೇವಸ್ಥಾನಗಳ ಆಡಳಿತ ಸಮಿತಿಯಲ್ಲಿ ಹಿಂದೂ- ಮುಸ್ಲಿಂ ಬಾಂಧವರನ್ನು ಸೇರಿಸಿಕೊಳ್ಳುವಂತದು. ಹಿಂದಿನ ತಲೆಮಾರಿನ ಪ್ರಮುಖರು ಈಗಲೂ ಮಸಿದಿ ದರ್ಗಾಗಳಿಗೆ ಎಣ್ಣೆ ಕೊಟ್ಟು ತಮ್ಮ ಮನೆಯಲ್ಲಿನೆಟ್ಟಿರುವ ಗಿಡಗಳಲ್ಲಿ ಆದ ಮೊದಲ ಹಣ್ಣು ಹಂಪಲು, ಕಾಯಿ, ಭತ್ತವನ್ನು ಮಸೀದಿ, ದರ್ಗಾಗಳಿಗೆ ನೀಡುವುದು ಅಂತವರ ಹೆಸರು ಹೇಳಿ ಆ ವಸ್ತುಗಳನ್ನು ಎಲಂ ಮಾಡುವುದು ಕೋಮು ಸಾಮರಸ್ಯಕ್ಕೆ ಉತ್ತಮ ನಿದರ್ಶನವಾಗಿದೆ. 26

ತುಳುವರ ಭೂತಕೋಲದ ಸಂದರ್ಭದಲ್ಲಿ ಹೆಚ್ಚಿನ ಬ್ಯಾರಿಗಳು ವ್ಯಾಪಾರಿಗಳಾಗಿ ಬಾಗವಹಿಸುವುದು. ವಿದ್ಯುತ್ ದೀಪ ಅಳವಡಿಸಲು. ಹೂವಿನ ಅಲಂಕಾರ ಸಂತೆ ವ್ಯಾಪಾರಿಗಳಾಗಿ ಕಂಡುಬರುವುದು ಬ್ಯಾರಿಗಳು. ಜಾತ್ರಾ ಉತ್ಸವದಲ್ಲಿ ತಾಲೀಮು. ಡೋಲು. ಗರ್ನಲ್. ಭಂಡಾರದ ಬೃಹತ್ ಮೆರವಣಿಗೆ ಗಳಲ್ಲಿ ಪಾಲ್ಗೊಳುವಂತದು ಹಾಗೂ ಕೋಲದ ಮಖ್ಯ ವಾದ್ಯ ನುಡಿಸುವವರು ಬ್ಯಾರಿಗಳಾಗಿದ್ಧಾರೆ. ತುಳು ನಾಡಿನ ಪ್ರಮುಖ ಕಲೆ ಯಕ್ಷಗಾನ ಬಯಲಾಟಗಳಾದ ಅಗೋಲಿ ಮಂಜಣ್ಣ ಕೃಷ್ಣಲೀಲೆ ಕಂಸವಧೆ. ಶ್ರೀದೇವಿ ಮಹಾತ್ಮೆ. ಕಟೀಲು ಶ್ರೀ ದುರ್ಗಾಪರಮೇಶ್ವರಿ ಮೇಳಗಳು ಮಖ್ಯಾವಾದವು ಇವುಗಳ ರಂಗ ಮಂದಿರದ ಅಲಂಕಾರ ಮತ್ತು ಮೇಳದಲ್ಲಿ ನಟನೆ ಮಾಡುವವರು ಬ್ಯಾರಿಗಳಾಗಿದ್ದಾರೆ. ಇವರು ಜೋಕಟ್ಟೆ ಅವರಾಗಿದ್ದು ಯಕ್ಷಗಾನದಲ್ಲಿ ಭೀಮನ ಪಾತ್ರ ನಿರ್ವಹಿಸುತ್ತಾರೆ. ಇವೆಲ್ಲವು ಜಿಲ್ಲೆಯಲ್ಲಿ ಕೆಲವೊಂದು ಕೋಮು ಸಂಘರ್ಷಗಳು ಕೆಲವು ಸೂಕ್ಷ್ಮ ಪ್ರದೇಶದಲ್ಲಿ ನಡೆದಿದ್ದರು ರಾಷ್ಟ್ರದ ಏಕತೆ ಮತ್ತು ಜಿಲ್ಲೆಯ ಸೌಹಾರ್ದತೆಗೆ ಬ್ಯಾರಿ ಜನಾಂಗ ನೀಡುತ್ತಾ ಬಂದಿರುವ ಉತ್ತಮವಾದ ನಿದರ್ಶನಗಳಾಗಿವೆ. 27

**ಪರಾಮರ್ಶನ ಗ್ರಂಥಗಳು :-**


1. ಅಬ್ದುಲ್ ರಹೀಮ್ ಟಿ.ಕೆ.– ಮಂಗಳೂರು ದರ್ಶನ –ಸಂಪುಟ –೨ ಪುಟ ಸಂಖ್ಯೆ–750
2. ಅದೇ – ಪುಟ ಸಂಖ್ಯೆ–751
3. ಪ್ರೊ. ಬಿ.ಎಮ್ ಇಚ್ಲಂಗೋಡು –ತುಳುನಾಡ ಬ್ಯಾರಿಗಳು– ಪುಟ ಸಂಖ್ಯೆ–235
4. ಅದೇ –ಪುಟ ಸಂಖ್ಯೆ–236
5. ಅದೇ – ಪುಟ ಸಂಖ್ಯೆ–237
6. ಅದೇ – ಪುಟ ಸಂಖ್ಯೆ–238
7. ಪ್ರೊ. ಸುಬೈರ್ ಪೆರಿಮೆ – ಪುಟ ಸಂಖ್ಯೆ–106
8. ಅದೇ
9. ಪ್ರೊ. ಸುಬೈರ್ – ಪೆರಿಮೆ – ಪುಟ ಸಂಖ್ಯೆ–107
10. ಅದೇ
11. ಪ್ರೊ. ಸುಬೈರ್ – ಪೆರಿಮೆ – ಪುಟ ಸಂಖ್ಯೆ–108
12. ಅದೇ
13. ಪ್ರೊ ಚಂದ್ರಕಲಾ ನಂದಾವರ – ಪೆರಿಮೆ – ಪುಟ ಸಂಖ್ಯೆ–87
14. ಅದೇ – ಪುಟ ಸಂಖ್ಯೆ–88
15. ಅಬ್ದುಲ್ ರಹೀಮ್ ಟಿ.ಕೆ.– ಮಂಗಳೂರು ದರ್ಶನ– ಸಂಪುಟ –೨ ಪುಟ ಸಂಖ್ಯೆ–752
16. ಅದೇ – ಪುಟ ಸಂಖ್ಯೆ–753
17. ಅದೇ – ಪುಟ ಸಂಖ್ಯೆ–754
18. ಪ್ರೊ. ಸುಬೈರ್ – ಪೆರಿಮೆ – ಪುಟ ಸಂಖ್ಯೆ–109
19. ಅದೇ – ಪುಟ ಸಂಖ್ಯೆ–110
20. ಡಾ. ಕೆ.ಎಮ್ ಲೋಕೇಶ್ – ಪೆರಿಮೆ – ಪುಟ ಸಂಖ್ಯೆ–17
21. ಪ್ರೊ. ಬಿ.ಎಮ್ ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ–175
22. ಅದೇ – ಪುಟ ಸಂಖ್ಯೆ–178
23. ಡಾ.ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲೀಮರು – ಪುಟ ಸಂಖ್ಯೆ–130,150
24. ಡಾ. ಎನ್ ಇಸ್ಮಾಹಿಲ್ – ಮಂಗಳೂರು ದರ್ಶನ –ಸಂಪುಟ –೨ ಪುಟ ಸಂಖ್ಯೆ–651
25. ಪ್ರೊ. ಬಿ.ಎಮ್ ಇಚ್ಲಂಗೋಡು– ಮಂಗಳೂರು ದರ್ಶನ –ಸಂಪುಟ –೧ ಪುಟ ಸಂಖ್ಯೆ–245
26. ಅಬ್ದುಲ್ ರಹೀಮ್ ಟಿ.ಕೆ.– ಮಂಗಳೂರು ದರ್ಶನ– ಸಂಪುಟ –೨ ಪುಟ ಸಂಖ್ಯೆ–758
27. ಅದೇ – ಪುಟ ಸಂಖ್ಯೆ–760

# ಅಧ್ಯಾಯ – 6

## ಬ್ಯಾರಿ ಸಮುದಾಯದ ಪ್ರಗತಿ ಮತ್ತು ಸಮುದಾಯದ ಸ್ಥಿತಿ-ಗತಿಗಳು

ಸಮಕಾಲೀನ ಕಾಲ ಘಟ್ಟದಲ್ಲಿ ಜಿಲ್ಲೆಯ ಅಭಿವೃದ್ಧಿಗೆ ಬ್ಯಾರಿ ಸಮುದಾಯ ಜನರು ವಿವಿಧ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಈ ನೆಲೆಯಲ್ಲಿ ಈ ಬ್ಯಾರಿಗಳು ಜಿಲ್ಲೆಯ ಆರ್ಥಿಕತೆಯ ಮುಖ್ಯ ಭಾಗವಾಗಿ ಸುಮಾರು ವರ್ಷಗಳಿಂದ ಗುರುತಿಸಿಕೊಂಡಿದ್ದಾರೆ ಮತ್ತು ವಿದೇಶ ವ್ಯಾಪಾರಕ್ಕೆ ಸಂಬಂಧಿಸಿ 'ಪೆರಿಪ್ಲಸ್ ಆಫ್ ಎರಿಥ್ರಿಯನ್ ಸಿ' ಎಂಬ ಪುಸ್ತಕ ಮಾಹಿತಿ ನೀಡುತ್ತದೆ. ಈ ನೆಲೆಯಲ್ಲಿ ಅರಬರು ಮತ್ತು ಮುಸ್ಲಿಮ್ ವ್ಯಾಪಾರಿಗಳು ಪಾಶ್ಚಿಮಾತ್ಯರ ಪ್ರವೇಶದೊಂದಿಗೆ ತಮ್ಮ ವಾಣಿಜ್ಯದಲ್ಲಿದ್ದ ಏಕಸ್ವಾಮ್ಯತೆಯನ್ನು ಬಿಡಬೇಕಾಯಿತು. ಭಾರತದ ಕರಾವಳಿ ಮತ್ತು ಸಿಲೋನ್ ನಡುವಿನ ವಾಣಿಜ್ಯ ಸಂಪರ್ಕದ ಕುರಿತು 6ನೇ ಶತಮಾನದ 'ಕೊಸ್ಮಸ್ ಇಂಡೀಕೊ ಬಸ್ತ್' ವೆಂಬ ಗ್ರಂಥದಲ್ಲಿ ಉಲ್ಲೇಖವಿದೆ. 1

ಬಸ್ರೂರು ವಾಣಿಜ್ಯದ ಮುಖ್ಯ ಕೇಂದ್ರವಾಗಿತ್ತು. ಹಾಗೂ ಕುಂಬಳೆಯ ಪ್ರಮುಖ ಬಂದರಾಗಿದ್ದು ಇವುಗಳ ಮೂಲಕ ಆಮದು ಮತ್ತು ರಫ್ತುಗಳು ವಿದೇಶಗಳ ಜೊತೆಗೆ ನಿರಂತರವಾಗಿ ನಡೆಯುತ್ತಿದ್ದವು. ಈ ರೀತಿಯಾಗಿ ಅರಬರು ಮತ್ತು ತುಳುನಾಡಿನ ಬ್ಯಾರಿಗಳ ನಡುವಿನ ಸುಧೀರ್ಘ ವ್ಯಾಪಾರ ಸಂಬಂಧದಿಂದಾಗಿ ಬ್ಯಾರಿಗಳ ವಾಣಿಜ್ಯವನ್ನೇ ಮುಖ್ಯ ಕಸುಬಾಗಿ ಮುಂದುವರಿಸಿದರು. ಈ ರೀತಿ ಬ್ಯಾರಿಗಳು ವ್ಯಾಪಾರಿಗಳಾಗಿ ಮುಂದುವರಿಯಲು ಧಾರ್ಮಿಕ ಹಿನ್ನಲೆಯು ಇದೆ. ಇಸ್ಲಾಂ ಧರ್ಮ ವ್ಯಾಪಾರ ಮತ್ತು ವೈಯಕ್ತಿಕ ಸಂಪಾಧನೆಗೆ ಹೆಚ್ಚಿನ ಒತ್ತು ನೀಡಿದೆ. ಹಾಗೂ ಎಲ್ಲಾ ರೀತಿಯ ದುಡಿಮೆ, ವೃತ್ತಿ, ಮತ್ತು ಕೆಲಸಕ್ಕೆ ಗೌರವ ಕೊಟ್ಟಿದೆ. ಆದರೆ ಹಂದಿಮಾಂಸ, ಅಮಲು ಪದಾರ್ಥ, ಕಾನೂನು ಬಾಹಿರ ಚಟುವಟಿಕೆಗಳಿಗೆ ನಿಷಿದ್ಧ (ಹರಮ್) ಮಾಡಿದೆ. 2

ತುಳುನಾಡಿನಲ್ಲಿ ಮೀನುಗಾರಿಕೆಯಂತಹ ಕೆಲವು ವ್ಯಾಪಾರಗಳು ಕೆಳ ಜಾತಿಯವರಿಗೆ ಮೀಸಲಾಗಿದ್ದರೂ ಈ ವ್ಯಾಪಾರವನ್ನು ಮುಸ್ಲಿಮರು ಕೈಗೆತ್ತಿಕೊಂಡಾಗ ಎಲ್ಲರಿಗೂ ಅನ್ವಯವಾಯಿತು.

ಜನಸಂಖ್ಯೆ ಹೆಚ್ಚಾದಂತೆ ಬ್ಯಾರಿಗಳಲ್ಲಿ ಬಡತನ ಹೆಚ್ಚಾಗತೊಡಗಿತ್ತು. ಆದ್ದರಿಂದಾಗಿ ಹೆಚ್ಚಿನ ಬ್ಯಾರಿಗಳು ದಿನಗೂಲಿ ಕಾರ್ಮಿಕರಾಗಿ ಕೆಲಸವನ್ನು ಮಾಡುತ್ತಿದ್ದರು. ಬ್ಯಾರಿಗಳು ದೊಡ್ಡ ಸಂಖ್ಯೆಯಲ್ಲಿ ದೋಣಿಗಾರರಾಗಿ ಕೆಲಸ ಮಾಡುತ್ತಿದ್ದರು. ಕೆಲವರು ಮಾಲಕರಾಗಿದ್ದರು. ದೋಣಿಗಳನ್ನು ಮೀನುಗಾರಿಕೆಗೆ ಬಳಸಲಾಗುತ್ತಿತ್ತು. ಬ್ಯಾರಿಗಳಿಗೆ ಮೀನು ವ್ಯಾಪಾರವು ಅತ್ಯಂತ ಜನಪ್ರಿಯ ವಾಣಿಜ್ಯ ಚಟುವಟಿಯಾಗಿದ್ದು, ದೋಣಿ ತುಂಬಾ ಮೀನುಗಳನ್ನು ತುಂಬಿ ದೂರದ ಹಳ್ಳಿಗಳು ಮತ್ತು ನಗರಗಳಿಗೆ ಸಾಗಿಸಿ ಮಾರಾಟ ಮಾಡುತ್ತಿದ್ದರು. 3

ತೆಂಗು ವ್ಯಾಪಾರ ಬ್ಯಾರಿಗಳ ಇನ್ನೊಂದು ಮುಖ್ಯ ಕಸುಬಾಗಿದ್ದು, ಬಹುಪಯೋಗಿ ಗುಣ ಹೊಂದಿರುವ ಇದನ್ನು ಕಲ್ಪವೃಕ್ಷ ಎಂದು ಕರೆಯಲಾಗಿದೆ. ಕಬ್ಬು ಜಿಲ್ಲೆಯ ಇನ್ನೊಂದು ವಾಣಿಜ್ಯ ಬೆಳೆಯಾಗಿತ್ತು. ಬ್ಯಾರಿಗಳು ಕಬ್ಬು ವ್ಯಾಪಾರದಲ್ಲಿ ಮೇಲುಗೈ ಸಾಧಿಸಿದ್ದು ತರಕಾರಿ, ಧಾನ್ಯ, ಬೇಳೆ, ಇತ್ಯಾದಿ ಸ್ಥಳೀಯ ಉತ್ಪನ್ನಗಳನ್ನು ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡುವ ಹೆಚ್ಚಿನವರು ಈ ಬ್ಯಾರಿಗಳು. ಕೆಲವೊಂದು ಪ್ರಮುಖ ಪ್ರದೇಶಗಳಲ್ಲಿ ವಾರದ ಸಂತೆಗಳು ನಡೆಯುತ್ತಿದ್ದು, ಬ್ಯಾರಿಗಳು ಆ ಸಂತೆಗಳಲ್ಲಿ ಪ್ರಮುಖ ವ್ಯಾಪಾರಿಗಳಾಗಿದ್ದಾರೆ. 4

19ನೇ ಶತಮಾನದಲ್ಲಿ ಜಿಲ್ಲೆಯಲ್ಲಿ ತಮ್ಮ ಏಕಸ್ವಾಮ್ಯವನ್ನು ಬಟ್ಟೆ ವ್ಯಾಪಾರದಲ್ಲಿ ಗಳಿಸಿದರು. ಈ ಬ್ಯಾರಿಗಳೇ ಕೆಲವು ಪ್ರಮುಖ ನಗರ, ಹಳ್ಳಿಗಳಲ್ಲಿ ಇಂದಿಗೂ ಪ್ರಮುಖ ಬಟ್ಟೆ ವ್ಯಾಪಾರದಲ್ಲಿ ತೊಡಗಿರುವುದನ್ನು ಕಾಣಬಹುದು. ಜಿಲ್ಲೆಯ ಹೋಟೇಲು ಉದ್ಯಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗುರುತಿಸಿಕೊಂಡಿದ್ದು ಮಾಂಸಹಾರಿ ಮತ್ತು ತರಕಾರಿ ಹೋಟೇಲುಗಳು ಅಧಿಕವಾಗಿ ನಡೆಸಿಕೊಂಡಿರುವವರು ಈ ಬ್ಯಾರಿಗಳೆ ಆಗಿದ್ದಾರೆ. ಈ ಹೋಟೇಲಿನಲ್ಲಿ ಮೀನು–ಊಟ, ವಿಶೇಷವಾದ ಬಿರಿಯಾಣಿ, ಪದಾರ್ಥಗಳು ಈ ಜಿಲ್ಲೆಯ ಜನರನ್ನು ಆಕರ್ಷಿಸಿದೆ.5

1930ರ ನಂತರ ಬೀಡಿ ಉದ್ಯಮ ವ್ಯಾಪಕವಾಯಿತು. ಈ ಬೇಡಿಕೆಯಿಂದಾಗಿ ಈ ಉದ್ಯಮದಲ್ಲಿ ಬಹು ಸಂಖ್ಯೆಯಲ್ಲಿ ಗುರುತಿಸಿಕೊಂಡಿರುವವರು ಜಿಲ್ಲೆಯಲ್ಲಿ ಹೆಚ್ಚಿನ ಬ್ಯಾರಿ ಸಮುದಾಯದವರೆನ್ನಬಹುದು. ಇದಕ್ಕೆ ಮುಖ್ಯ ಕಾರಣ ಬ್ಯಾರಿ ಮಹಿಳೆಯರು ಇತರ ಕಸುಬುಗಳಿಗೆ ಹೋಗದೆ ಮನೆಯಲ್ಲೇ ತಮ್ಮ ಬಡತನದಿಂದಾಗಿ ಬೀಡಿ ಕಟ್ಟುವುದರಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇತರ ವ್ಯಾಪಾರ ಉದ್ದಿಮೆಗಳಾದ ಮರದ ವ್ಯಾಪಾರ, ಹಂಚು ತಯಾರಿಕೆಗಳಲ್ಲಿ ಬ್ಯಾರಿಗಳ ಪ್ರವೇಶ 20ನೇ ಶತಮಾನದಲ್ಲಿ ಕಂಡು ಬರುತ್ತದೆ. ಇಟ್ಟಿಗೆ ತಯಾರಿಕೆಯಲ್ಲಿ ಗುರುತಿಸಿದವರು ಬ್ಯಾರಿಗಳೇ ಆಗಿರುತ್ತಾರೆ. ಈ ರೀತಿ ಜಿಲ್ಲೆಯಲ್ಲಿ ಧೀರ್ಘ ಕಾಲದವರೆಗೆ ವಿವಿಧ ಉದ್ದಿಮೆಯಯಲ್ಲಿ ತೊಡಗಿಸಿಕೊಂಡಿದ್ದಾರೆ. 6

ಬ್ಯಾರಿಗಳು ಆಧುನಿಕ ಶಿಕ್ಷಣದ ಪ್ರಭಾವದಿಂದಾಗಿ ಉನ್ನತ ವಿದ್ಯಾಭ್ಯಾಸ ಪಡೆದು ತಮ್ಮ ಹಿರಿಯರು ನಡೆಸಿಕೊಂಡು ಬಂದ ಪ್ರಮುಖ ಉದ್ದಿಮೆಗಳಲ್ಲಿ ಗುರುತಿಸಿಕೊಳ್ಳದೆ ವಿದ್ಯಾವಂತರಾಗಿ ಉದ್ಯೋಗಕ್ಕಾಗಿ ಇಂದು ವಿದೇಶಗಳಿಗೆ ಮತ್ತು ದೇಶದ ನಾನಾ ಭಾಗಗಳಲ್ಲಿ ನೆಲೆಸಿ ತಮ್ಮ ಆರ್ಥಿಕ ಬದುಕಿನಲ್ಲಿ ಐಶಸ್ವಿ ಸಾಧಿಸಿದ್ದಾರೆ. ಈ ಜನಾಂಗದ ಪ್ರಮುಖರು ಇಂದು ಬೃಹತ್ ಉದ್ದಿಮೆ, ಕೈಗಾರಿಕೆ, ವಿದ್ಯಾ ಸಂಸ್ಥೆಗಳ ಮಾಲಿಕತ್ವ, ಕಟ್ಟಡಗಳ ನಿರ್ಮಾಣ ಹಾಗೂ ಮಾಲಿಕತ್ವ ಇತ್ಯಾದಿ ಪ್ರಮುಖ ರಂಗದಲ್ಲಿ ಗುರುತಿಸಿಕೊಂಡು, ಜಿಲ್ಲೆಯ ಅಭಿವೃದ್ಧಿಗೆ ವಿಶೇಷ ಕೊಡುಗೆಯನ್ನು ನೀಡುತ್ತಿರುವುದು ಗಮನಾರ್ಹ.7

ಬ್ಯಾರಿ ಜನಾಂಗದ ಐತಿಹಾಸಿಕ ಹಿನ್ನಲೆಯನ್ನು ಪರಿಶೀಲಿಸಿದಾಗ ಶೇಕಡಾ 95 ಬ್ಯಾರಿಗಳು ಈ ಜಿಲ್ಲೆಯಲ್ಲಿ ವ್ಯಾಪಾರವನ್ನೇ ಮುಖ್ಯ ಕಸುಬನ್ನಾಗಿ ಬದುಕುತ್ತಿದ್ದ ಪರಂಪರೆಯಿತ್ತು. ಆದರೆ ಕಳೆದೆರೆಡು ದಶಕಗಳಲ್ಲಿ ಮಾಹಿತಿ ತಂತ್ರಜ್ಞಾನದ ಕ್ಷೇತ್ರ ಮತ್ತು ಕ್ರಾಂತಿಕಾರರ ಬದಲಾವಣೆಯಿಂದಾಗಿ ಉದ್ದಿಮೆಗಳು ವೇಗವಾದ ಹೊಸ ಪರಿವರ್ತನೆಯತ್ತ ಮುನ್ನಡೆದಾಗ ಅವುಗಳ ಜತೆಯಲ್ಲೇ ಬ್ಯಾರಿಗಳು ವ್ಯಾಪಾರ ರಂಗದಲ್ಲಿ ಪೈಪೋಟಿಯಿಂದ ಮುನ್ನಡೆಯ ತೊಡಗಿದರು. ಈ ನೆಲೆಯಲ್ಲಿ ಜಿಲ್ಲೆಯ ಪ್ರಮುಖ ಉದ್ಯಮಗಳಲ್ಲಿ ಬ್ಯಾರಿಗಳ ಸಾಧನೆ ಅಪೂರ್ವವಾಗಿ ದಾಖಲಿಸಲ್ಪಟ್ಟಿದೆ. ಮುಖ್ಯವಾಗಿ ತುಂಬೆಯ ಬಿ.ಎ. ಮುಯಿಹ್ಯುದ್ದೀನ್ ಗ್ರೂಪ್ ಆಫ್ ಇಂಡಸ್ಟ್ರೀಸ್. ದೇರಳಕಟ್ಟೆಯ ಯೆನಪೋಯ ಗ್ರೂಫ್ ಆಫ್ ಇಂಡಸ್ಟ್ರೀಸ್, ಪೀಸಿ ಗ್ರೂಫ್ ಅಫ್ ಇಂಡಸ್ಟ್ರೀಸ್, ಕಣಚುರು ಸಮೂಹ ಸಂಸ್ಥೆ, ಹಸಣ್ ಹಾಣೆ ಸಮೂಹ ಸಂಸ್ಥೆ, ಪ್ಲಾಮಾ ಸಮೂಹ ಸಂಸ್ಥೆ, ವಲ್ಡ್ ವೈಡ್ ಶಿಪ್ಪಿಂಗ್, ಕಂಪನಿ, ಡೆಕ್ಕನ್ ಪ್ಲಾಸ್ಟ್ ಇಂಡಸ್ಟ್ರೀಸ್, ಬೈಕಂಪಾಡಿ, ಬ್ಯಾರೀಸ್ ಸಮೂಹ ಸಂಸ್ಥೆ, ಫೀಝಾ ಸಮೂಹ, ಸಂಸ್ಥೆಗಳ ಹಾಗೂ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಜಿಲ್ಲೆಯಲ್ಲಿ ಮಂಚೂಣಿಯಲ್ಲಿರುವರು. ವಿಶ್ವಾಸ್, ಬಾವಾ ಬಿಲ್ಡರ್ಸ್, ಪ್ರೆಸಿಡೆನ್ಸಿ ಬಿಲ್ಡರ್ಸ್, ಬೀಡಿ ಉದ್ಯಮದಲ್ಲಿ ನಜರ್, ಸುಲ್ತಾನ್, ಆರ್.ಕೆ. ಬೀಡೀಸ್, ಸಂಸ್ಥೆಗಳು ಹಾಗೂ ಇತರ ಉಧ್ಯಮಗಳಾದ ಅಡಿಕೆ ಮಾರುಕಟ್ಟೆ, ಕಂಪ್ಯೂಟರ್ ಉದ್ಯಮ, ರಬ್ಬಂ ಹಾಗೂ ಚಿಲ್ಲರೆ ವ್ಯಾಪಾರದಲ್ಲಿ ಬ್ಯಾರಿಗಳ ಸಂಖ್ಯೆ ಮುಂಚೂಣಿಯಲ್ಲಿದ್ದು, ಎಲ್ಲದಕ್ಕಿಂತ ಮುಖ್ಯವಾಗಿ ಚಿನ್ನಾಭರಣಗಳ ವ್ಯಾಪಾರದಲ್ಲಿ ಜಿಲ್ಲೆಯಲ್ಲಿ ಅಗ್ರಸ್ಥಾನವನ್ನು ಹೊಂದಿರುವವರು ಬ್ಯಾರಿಗಳೇ ಹಾಗೂ ಜಿಲ್ಲೆಯ ಮೀನು ವ್ಯಾಪಾರದಲ್ಲಿ ಇದೇ ಜನರ ಮೇಲುಗೈಯಾಗಿದೆ.

ಲೋಗನ್ ತನ್ನ ಮಲಬಾರ್ ಮ್ಯಾನ್ಯುವೆಲ್‌ನಲ್ಲಿ ಬ್ಯಾರಿ (ಮಾಪಿಳ್ಳೆ) ಗಳನ್ನು ಅನಕ್ಷರಸ್ಥ ಜನರು ಎಂದು ಉಲ್ಲೇಖಿಸಿದ್ದಾರೆ. ಪ್ರಾರಂಭಿಕ ಹಂತದಲ್ಲಿ ಬ್ಯಾರಿಗಳು ಧಾರ್ಮಿಕ ಶಿಕ್ಷಣದಲ್ಲಿ ನಿರತರಾಗಿದ್ದ ಕಾರಣ ಆಧುನಿಕ ಶಿಕ್ಷಣವು ಕೆಳಹಂತದಲ್ಲಿ ಉಳಿದು ಅನಕ್ಷರಸ್ಥರಾಗಿ ಇರುವಂತೆ ಮಾಡಿತೆನ್ನಬಹುದು. ಈ ರೀತಿ ಬ್ಯಾರಿಗಳು ಅರ್ಧ ಬೆಳವಣಿಗೆ ಹೊಂದಿದ ಅರಬ್ಬೀ ಮಲಯಾಳಂ ಮತ್ತು ಕನ್ನಡ ಭಾಷೆಯ ಮಧ್ಯೆ ಸಿಲುಕಿಕೊಂಡು ಯಾವುದನ್ನು ಆಯ್ಕೆ ಮಾಡಲು ಅಸಾಧ್ಯವಾಗದೇ ದಕ್ಕನಿಗಳ ಪ್ರಭಾವವದಿಂದ ಶೈಕ್ಷಣಿಕವಾದ ಸ್ಫೂರ್ತಿಯನ್ನು ಪಡೆಯಲು ವಿಫಲವಾದರು. ಮುಸ್ಲಿಂ ಧರ್ಮಗುರುಗಳು ಧಾರ್ಮಿಕ ಶಿಕ್ಷಣಕ್ಕೆ ವಿಶೇಷ ಆದ್ಯತೆಯನ್ನು ನೀಡಿ 'ಶಿಕ್ಷಣ' ವೆನ್ನುವುದನ್ನು 'ಇಲ್ಮ್' ಎಂದು ಕಲಿಸುತ್ತಿದ್ದರು. ಇದು ಇಸ್ಲಾಂ ಧರ್ಮದ ತತ್ವ ಸಿದ್ಧಾಂತಗಳು, ಆದರ್ಶಗಳನ್ನು ಕೇಂದ್ರೀಕರಿಸಿಕೊಂಡಿತ್ತು. 9

ಬ್ಯಾರಿಗಳಿಗೆ ಹಿಂದಿನಿಂದಲೂ ತಮ್ಮ ದೈನಂದಿನ ಜೀವನ ಮತ್ತು ಪರಿಸರದ ಕುರಿತು ಜ್ಞಾನ ಹೆಚ್ಚಿಸಲು ಪೂರಕವಾದ ಆಧುನಿಕ ಶಿಕ್ಷಣವನ್ನು ಒದಗಿಸುವ ಸೌಲಭ್ಯ ಇರದೇ ಇರುವ ಸಂದರ್ಭದಲ್ಲಿ 19ನೇ ಶತಮಾನದಲ್ಲಿ ಬ್ರಟೀಷರು ಭಾರತದಲ್ಲಿ ವೈಜ್ಞಾನಿಕ. ಆಧುನಿಕ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರುವುದರೊಂದಿಗೆ ಇಂದು ಬ್ಯಾರಿಗಳಲ್ಲಿ ಸಮಕಾಲಿನ ಜೀವನದಲ್ಲಿ ಮಹತ್ತರವಾದ ಬದಲಾವಣೆಯನ್ನು ತರುವಲ್ಲಿ ಯಶಸ್ವಿಯಾಗಿದೆಯೆನ್ನಬಹುದು. ಈ ಸಮಯದಲ್ಲಿ ಜಿಲ್ಲೆಯ ಬ್ಯಾರಿಗಳಲ್ಲಿ ಬ್ರಿಟಿಷ್ ವಿರೋಧಿ ನಿಲುವು ಹೆಚ್ಚಾಗತೊಡಗಿತು.

ಟಿಪ್ಪು ಸುಲ್ತಾನನ ಮರಣ ನಂತರ ಇದು ತೀವ್ರವಾದ ಸ್ವರೂಪವನ್ನು ಪಡೆಯಿತು. ಬ್ರಿಟೀಷರು ತಮ್ಮ ವಿರೋಧಿಗಳೆಂದು ಸಾಮಾನ್ಯವಾಗಿ ಬ್ಯಾರಿಗಳು ಭಾವಿಸಲು ಆರಂಭಿಸಿದರೂ ಮುಸ್ಲಿಂ ವಿದ್ವಾಂಸರು ಬ್ರಿಟೀಷರು ಮತ್ತು ಆಧುನಿಕ ಶಿಕ್ಷಣ ವ್ಯವಸ್ಥೆ ನಿಷೇಧಾತ್ಮಕವೆಂದು ಪರಿಗಣಿಸಿದರು. ಆದರೂ ಕೆಲವು ಶ್ರೀಮಂತ ಬ್ಯಾರಿ ವರ್ತಕರು ತಮ್ಮ ವ್ಯಾಪಾರದ ಹಿತದೃಷ್ಟಿಯಿಂದ ಬ್ರಿಟಿಷ್ ಕಂಪನಿ ಜೊತೆ ಉತ್ತಮ ಸ್ನೇಹವನ್ನು ಹೊಂದಿದ್ದರು. 10

ಕ್ರಿ.ಶ. 1799ರಲ್ಲಿ ಟಿಪ್ಪುವಿನ ಮರಣ ನಂತರ ದಕ್ಷಿಣ ಕನ್ನಡ ಬ್ರಿಟಿಷರು ಕೈವಶವಾಗುವುದರೊಂದಿಗೆ 1947 ರವರೆಗೆ ಕೆನರಾವೆಂಬ ಹೆಸರಿನೊಂದಿಗೆ ಬ್ರಿಟಿಷ್ ವಸಾಹತುಶಾಹಿ ಆಡಳಿತ ಮುಂದುವರಿಯುತ್ತದೆ. ಈ ಸಂದರ್ಭದಲ್ಲಿ ಈ ಜಿಲ್ಲೆಯ ಜನಸಂಖ್ಯೆಯ ಕುರಿತಾಗಿ 1891ರ ಜನಗಣತಿ ವರದಿಯು ಹಿಂದೂಗಳು 81.68, ಮುಸಲ್ಮಾನರು 10.60, ಕ್ರೈಸ್ತರು 6.75 ಮತ್ತು ಜೈನರು 0.97 ಎಂದು ಉಲ್ಲೇಖಿಸಿದೆ. ಈ ಜಿಲ್ಲೆಯಲ್ಲಿ ನೆಲೆಸಿರುವ ಬ್ಯಾರಿ ಜನಾಂಗವನ್ನು ಬ್ರಿಟಿಷ್ ದಾಖಲೆಗಳು ಬ್ಯಾರಿಗಳೆಂದು ಉಲ್ಲೇಖಿಸದೇ ಇರುವುದನ್ನು ಗಮನಿಸಬಹುದು. 11

ಈ ಜನಾಂಗ ಶಿಕ್ಷಣ ಕ್ಷೇತ್ರದಲ್ಲಿ ಸಾಧಿಸಿದ ಪ್ರಗತಿಯ ಕುರಿತಾದ ಸ್ಪಷ್ಟವಾದ ಮಾಹಿತಿಗಳು ಲಭ್ಯವಾಗದೇ ಇದ್ದರೂ 1895ರ ಗ್ಯಾಸೆಟಿಯರ್‌ನಲ್ಲಿ ಇದನ್ನು 'ಅವರ್ಗೀಕೃತ ಜಾತಿಗಳು' ಎನ್ನುವ ಕೋಷ್ಟಕದಲ್ಲಿ ನಮೂದಿಸಿರುವ ಆಧಾರದಲ್ಲಿ ಒಟ್ಟು ಸಂಖ್ಯೆಯಲ್ಲಿ 14, ಇದರಲ್ಲಿ ಪುರುಷರು 7, ಮತ್ತು 7 ಮಹಿಳೆಯರು ಎಂದು ಉಲ್ಲೇಖಿಸಿರುವುದು ಗಮನಾರ್ಹ. 12

1871/1881 ರ ಸಂದರ್ಭದಲ್ಲಿ ಬ್ರಿಟೀಷರು ಜನಗಣತಿಯಲ್ಲಿ ಬ್ಯಾರಿಗಳನ್ನು ಮಾಪಿಳ್ಳೆಗಳು ಅಥವಾ ಮುಸ್ಲಿಂ ಎಂದು ನೊಂದಾಯಿಸಿಕೊಂಡಿರುವುದನ್ನು ಗಮನಿಸಬಹುದು. ವಸಾಹತುಶಾಹಿ ಪೂರ್ವದಲ್ಲಿ ಅಂದರೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಈ ಜನಾಂಗ ವ್ಯಾಪಾರ, ವಾಣಿಜ್ಯ, ಕರ ಕುಶಲ ಕೈಗಾರಿಕೆಯಲ್ಲಿ ನುರಿತವಾಗಿದ್ದು ನಂತರ ಅವಕಾಶದ ಕೊರತೆಯಿಂದ ಪ್ರವರ್ದಮಾನಕ್ಕೆ ಬರುವಲ್ಲಿ ವಿಫಲರಾದರೆಂದು ಇತಿಹಾಸಗಾರರು ಅಭಿಪ್ರಾಯ ಪಡುತ್ತಾರೆ. 13

ಕ್ರಿ.ಶ. 1822ರ ಕೆನರಾದ ಕಲೆಕ್ಟರನು ಹೇಳುವ ಹಾಗೆ ಕೆನರಾದಲ್ಲಿ ಭೌತರೂಪದ ವಿಜ್ಞಾನವನ್ನು ಭೋದಿಸುವ ಶಾಲಾ ಕಾಲೇಜುಗಳು ಮತ್ತು ಶಿಕ್ಷಕರು ಕಾಣುವುದಿಲ್ಲ ಎಂದಿರುವುದು ಗಮನಾರ್ಹ. 1894ರ ಜಿಲ್ಲಾ ಗ್ಯಾಸೆಟಿಯರ್ ಮಾಪಿಳ್ಳೆಗಳನ್ನು ಜಿಲ್ಲೆಯ ಬಹಳ ಮುಖ್ಯ ಮುಸ್ಲಿಂ ಜನಾಂಗವಾಗಿ ಉಲ್ಲೇಖಿಸಿರುವುದು ಕಾಣಬಹುದು. ಶಿಕ್ಷಣ ಕ್ಷೇತ್ರದಲ್ಲಿ ಆರಂಭದಲ್ಲಿ ಬ್ಯಾರಿಗಳು ಆಸಕ್ತಿಯನ್ನು ವಹಿಸದಿದ್ದರೂ 1881ರ ಶಿಕ್ಷಣ ಹೊಂದಿದ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ 4,476 ಪುರುಷರು, 614 ಮಹಿಳೆಯರೆಂದು ತಿಳಿಸುತ್ತದೆ.

1893 ರವರೆಗೆ ಉನ್ನತ ಶಿಕ್ಷಣದಲ್ಲಿ ಮೆಟ್ರಿಕ್ಯುಲೇಷನ್ ಪಾಸು ಮಾಡಿದವರಲ್ಲಿ ಮಹಿಳೆಯರ ಸಂಖ್ಯೆ 183 ಎಂದು ಬಿ.ಎ. ಪರೀಕ್ಷೆಗೆ 7 ಜನ ಹಾಜರಾಗಿದ್ದಾರೆಂದು. ಇವರಲ್ಲಿ ಮುಸ್ಲಿಂ. ಬ್ರಾಹ್ಮಣ–1, ಪಾರ್ಸಿಗಳು –4. ಐರೋಪ್ಯನ್ನರು–150, 1893-1894ರ ಮದ್ರಾಸು ವಿಶ್ವವಿದ್ಯಾನಿಲಯ ತನ್ನ ವಾರ್ಷಿಕ ವರದಿಯಲ್ಲಿ ತಿಳಿಸುತ್ತದೆ. ಜಿಲ್ಲೆಯ ಗ್ಯಾಸೆಟಿಯರ್ ಪ್ರಕಾರ ಈ ಜನಾಂಗದವರು ಆಧುನಿಕ ಶಿಕ್ಷಣದಿಂದ ವಂಚಿತರಾಗಿದ್ದಾರೆಂದು ಉಲ್ಲೇಖಿಸಿರುವುದು ಗಮನಾರ್ಹ. 14

1892-1893 ರಲ್ಲಿ ವಿಶ್ವವಿದ್ಯಾನಿಲಯ ಮಟ್ಟದಲ್ಲಿ 3 ಜನ ಮುಸ್ಲಿಂ ವಿದ್ಯಾರ್ಥಿಗಳ ಅಧ್ಯಯನ ಮಾಡುತ್ತಿದ್ದು 7 ಜನ ಸೆಕಂಡರಿ ಶಾಲೆಗಳಲ್ಲಿ ಕಲಿಯುತ್ತಿದ್ದರು. ಒಟ್ಟು 10 ಮುಸ್ಲಿಂ ಶಾಲೆಗಳಿದ್ದು, 7 ಬೋರ್ಡ್ ಶಾಲೆಗಳು. 1 ಅನುದಾನಿತ, 2 ಅನುದಾನ ರಹಿತ ಶಾಲೆಗಳೆಂದು ಮಾಹಿತಿ ನೀಡುತ್ತದೆ. 1921ರ ಜನಗಣತಿ ಪ್ರಕಾರ ಬ್ಯಾರಿಗಳಲ್ಲಿ ಪುರುಷರು 12.7% ಮತ್ತು ಮಹಿಳೆಯರು 1.5% ಅಕ್ಷರಸ್ಥರೆಂದು 1931 ರಲ್ಲಿ 13.4% ಪುರುಷರು ಹಾಗೂ 1.8 ಮಹಿಳೆಯರು ಅಕ್ಷರಸ್ಥರೆಂದು ಮಾಹಿತಿ ನೀಡುತ್ತದೆ. 15

ಕ್ರಿ.ಶ. 1799 ರಿಂದ 1990 ರವರೆಗೆ ಶೈಕ್ಷಣಿಕವಾಗಿ ಹಿಂದುಳಿದಿರುವ ಬ್ಯಾರಿ ಜನಾಂಗದಲ್ಲಿ ಸರ್ಕಾರಿ ನೌಕರರಾಗಿ, ಐ.ಎಸ್., ಐ.ಪಿ.ಎಸ್., ಕೆ.ಎ.ಎಸ್. ಅಧಿಕಾರಿಗಳು, ನ್ಯಾಯಾಧೀಶರು, ಪ್ರಮುಖ ರಾಜಕೀರ ನೇತಾರರು, ಕಂಡು ಬರುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಬ್ಯಾರಿ ಜನಾಂಗ ಆಧುನಿಕ ಶಿಕ್ಷಣದಲ್ಲಿ ಹಿಂದುಳಿದಿರುವುದೇ ಮುಖ್ಯ ಕಾರಣ. ಆದರೆ ೨೦ನೇ ಶತಮಾನದ ಆರಂಭದ ಹೊತ್ತಿಗೆ ಶಿಕ್ಷಣ ಮತ್ತು ಸುಧಾರಣೆಯ ಅರಿವು ಮೂಡುವುದರೊಂದಿಗೆ ಈ ಹೊಸ ಜಾಗತಿಯು ಧಾರ್ಮಿಕ ಸುಧಾರಣೆಯನ್ನು ಸೃಷ್ಟಿಸಿತು. ಶೆರುಲ್ ಮತ್ತು ಶಮ್ಯಾಡ್ ಎಂಬ ನಾಯಕರು ಶಿಕ್ಷಣದ ಮಹತ್ವವನ್ನು ಸಮುದಾಯಕ್ಕೆ ಪ್ರತಿಪಾದಿಸಿದರು. 1922 ರಲ್ಲಿ ಕೇರಳ ಮುಸ್ಲಿಂ ಐಕ್ಯ ಸಂಘವು ಪ್ರಮುಖ ಹೆಜ್ಜೆಯನ್ನು ಇಟ್ಟು ಮುಸ್ಲಿಮರಲ್ಲಿ ಒಗ್ಗಟ್ಟು ಮತ್ತು ಹಳೆಯ ಸಂಪ್ರದಾಯಗಳನ್ನು ಹೋಗಲಾಡಿಸಿ ಹೊಸ ಆಧುನಿಕ ವಿಚಾರಗಳನ್ನು ಮೂಡಿಸಲಾಗುತ್ತದೆ. ಸಕ್ರಿಯ ಕಾರ್ಯಕರ್ತರಾಗಿ ಶ್ರಮಿಸುವುದರೊಂದಿಗೆ 1932ರ ರ ಐಕ್ಯ ಸಂಘದ ಸಮಾವೇಶದಲ್ಲಿ ಆಚರಣೆಗಳನ್ನು ಕಡಿಮೆಗೊಳಿಸಿ ಆಧುನಿಕ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಾ ಉತ್ತಮ ಧಾರ್ಮಿಕ ಶಿಕ್ಷಣದಂತಹ ಸುಧಾರಣೆಗೆ ಪ್ರಯತ್ನಿಸಿದ್ದು ಗಮನಾರ್ಹ. 16

20ನೇ ಶತಮಾನದಲ್ಲಿ ಹಲವು ಸಂಘಟಣೆಗಳು ಸುಧಾರಣೆ ಮತ್ತು ಶಿಕ್ಷಣಕ್ಕಾಗಿ ಸಕ್ರಿಯವಾದ ಕಾರ್ಯವನ್ನು ನಿರಂತರವಾಗಿ ನಿರ್ವಹಿಸಿದವು. 1892 ರಲ್ಲಿ ಮುನೀರುಲ್ ಇಸ್ಲಾಂ ಮದರಸ ಮೊದಲ ಶಾಲೆಯಾಗಿತ್ತು. 1971 ರಲ್ಲಿ ಬದ್ರಿಯಾ ಮಸೀದಿಯನ್ನು ನಿರ್ಮಿಸಲಾಯಿತು. ನಂತರ ಪ್ರಮುಖ ನಾಯಕರು ಶೈಕ್ಷಣಿಕ ಮತ್ತು ಸುಧಾರಣೆಗಳ ಅಭಿಯಾನವನ್ನು ಮನಗಂಡು ಅವರ ಶೈಕ್ಷಣಿಕವಾದ ಪ್ರಯತ್ನ ಮತ್ತು ಸ್ಫೂರ್ತಿಯಿಂದ 1924 ರಲ್ಲಿ ಮುಸ್ಲಿಂ ಎಜುಕೇಶನ್ ಅಸೋಶಿಯೇಷನ್ ಸ್ಥಾಪನೆಗೊಂಡಿತು. 17

1920-1930 ರ ದಶಕದಲ್ಲಿ ಬ್ಯಾರಿ ಜನಾಂಗದಲ್ಲಿ ಮಧ್ಯಮ ವರ್ಗ ಸೃಷ್ಟಿಯಾಗುವುದರೊಂದಿಗೆ ಪ್ರಾಥಮಿಕ ಮತ್ತು ಉನ್ನತ ಶಿಕ್ಷಣದ ಕುರಿತಾಗಿ ಹೆಚ್ಚಿನ ಕಾಳಜಿ, ಆಸಕ್ತಿ ವಹಿಸಿ, ಅದರ ಫಲವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಿತರಾದ ಬ್ಯಾರಿಗಳು ಸರ್ಕಾರಿ ಹುದ್ದೆಗಳು ಮತ್ತು ಇತರೇ ಕ್ಷೇತ್ರದಲ್ಲಿ ತಮ್ಮ ಪ್ರಾತಿನಿಧ್ಯವನ್ನು ಗಳಿಸುವುದರೊಂದಿಗೆ ಮದ್ರಾಸಿನಲ್ಲಿರುವ ಹೈಕೋರ್ಟ್‌ಗೆ ಒಬ್ಬ ಮುಸ್ಲಿಂ ನ್ಯಾಯಾಧೀಶರನ್ನು ನೇಮಿಸಲು ಮನವಿ ಮಾಡಿರುವುದು ಗಮನಾರ್ಹ. 1929 ರಲ್ಲಿ ಮದ್ರಾಸಿನ ಗವರ್ನರ್ ಮಂಗಳೂರು ಭೇಟಿಯ ಸಂದರ್ಭದಲ್ಲಿ ತಮ್ಮ ಅಸಮಧಾನ ಮತ್ತು ಬ್ಯಾರಿಗಳ ಆಧುನಿಕ ಶಿಕ್ಷಣದ ಪ್ರಗತಿಯ ಕುರಿತಾಗಿ ವಿಶ್ಲೇಷಿಸಿರುವುದು ಗಮನಾರ್ಹವಾಗಿದೆ. 18

ಕೆಲವು ಮುಸ್ಲಿಮರು ಉನ್ನತ ಹುದ್ದೆಯಲ್ಲಿ ತಮ್ಮ ಸೇವೆಯನ್ನು ನೀಡಿದ್ದು ಅಝೀಝುದ್ದೀನ್ ಹುಸೇನ್ ಸಾಹೇಬ್ 1905, ಜೆಹುಸೇನ್ 1931 ಮತ್ತು ಹುಮಾಯುನ್ ಸಾಹೇಬ್ ಬಹುದ್ದೂರ್ 1935 ಪ್ರಮುಖ ಕಲೆಕ್ಟರ್‌ಗಳಾಗಿ, ನ್ಯಾಯಧೀಶರಾಗಿಯೂ ಕಾರ್ಯ ನಿರ್ವಹಿಸಿದ ನೀರ್ ಅಮಿರುದ್ದೀನ್ ಪ್ರಮುಖರು. ಜಿಲ್ಲೆಯಲ್ಲಿ ಸಮಕಾಲೀನ ಬೇರೆ ಜನಾಂಗದ ಶೈಕ್ಷಣಿಕ ಪ್ರಗತಿಯನ್ನು ಅವಲೋಕಿಸಿದ ಬ್ಯಾರಿ ಸಮುದಾಯದ ನಾಯಕರು ಶೈಕ್ಷಣಿಕ ಪ್ರಗತಿಯಿಂದಲೇ ವೈಯಕ್ತಿಕ ಹಾಗೂ ಸಾಮುದಾಯಿಕ ಪ್ರಗತಿ ಸಾಧ್ಯ ಎಂದು ಪರಿಗಣಿಸಿ ಶ್ರಮಿಸಿರುವುದು ಪ್ರಶಂಸನೀಯವಾಗಿದೆ. 19

ಬ್ಯಾರಿಗಳು ಶೈಕ್ಷಣಿಕ ಕ್ರಾಂತಿಗೆ ತನ್ನ ಕೊಡುಗೆಯನ್ನು ನೀಡಿದವರು ಮಾಜಿ ಸಚಿವ ಬಿ. ಎ. ಮೈೂದ್ದೀನ್ ಇವರ ಮಾರ್ಗದರ್ಶನದಿಂದ ಹಲವು ಖಾಸಗಿ ಹಾಗೂ ಸರಕಾರಿ ಹೈಸ್ಕೂಲ್, ಕಾಲೇಜು, ಇಂಗ್ಲೀಷ್ ಮಾಧ್ಯಮ ಶಾಲೆಗಳು ಸ್ಥಾಪನೆಗೊಂಡವು. ಇದು ಏಳನೇ ತರಗತಿಯಲ್ಲಿ ವಿದ್ಯಾಭ್ಯಾಸ ನಿಲ್ಲಿಸುತ್ತಿದ್ದ ಬ್ಯಾರಿಗಳ ಹೆಣ್ಮಕ್ಕಳು ಇಂದು ನಗರದ ಪ್ರಮುಖ ಮಹಿಳಾ ಶಾಲಾ ಕಾಲೇಜುಗಳಲ್ಲಿ ಉನ್ನತ ವಿದ್ಯಾಭ್ಯಾಸ ಮಾಡುತ್ತಿರುವುದು ಮುಖ್ಯ ಉದಾಹರಣೆಯಾಗಿದೆ. ಸರಕಾರ 2ಬಿ ಪಂಗಡದಲ್ಲಿ ಮುಸ್ಲಿಮರಿಗೆ ಶಿಕ್ಷಣ ಹಾಗೂ ಉದ್ಯೋಗದಲ್ಲಿ ಜಾರಿಗೊಳಿಸಿದ 4% ಮೀಸಲಾತಿಯಿಂದಾಗಿ ಬ್ಯಾರಿಗಳ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಮೆಡಿಕಲ್, ಇಂಜಿನಿಯರ್ ಪದವಿಧರರಾಗಿ ಮುಂದುವರಿಯುತ್ತಿರುವುದು ಮತ್ತು ಬ್ಯಾರಿಗಳು ಈ ಜಿಲ್ಲೆಯ ಪ್ರಗತಿಯಲ್ಲಿ ಕೊಡುಗೆ ನೀಡುತ್ತಿರುವುದು ಗಮನಾರ್ಹ. 20

ದಕ್ಷಿಣ ಕನ್ನಡ ಜಿಲ್ಲೆಯ ಸಮಕಾಲಿನವಾಗಿ ಹಲವು ಜನ ಶಿಕ್ಷಿತ ಬ್ಯಾರಿಗಳು ಉನ್ನತ ಹುದ್ದೆಯಲ್ಲಿರುವುದು ಸಂತೋಷದ ವಿಷಯವಾಗಿದ್ದು, ಜಿಲ್ಲೆಯ ಬ್ಯಾರಿಗಳು ಐ.ಎ.ಎಸ್., ಐ.ಪಿ.ಎಸ್., ಉನ್ನತ ಅಧಿಕಾರಿಗಳಾಗಿ ನುರಿತ ಅನುಭವಿ ಪ್ರಖ್ಯಾತ ವೈದ್ಯರುಗಳಾಗಿ, ಸಮಾಜ ಸೇವಕರಾಗಿ, ವಿಜ್ಞಾನ ಮತ್ತು ಇಂಜಿನಿಯರಿಂಗ್ ಕ್ಷೇತ್ರದಲ್ಲಿ ದೇಶದಲ್ಲಿ ಮಾತ್ರವಲ್ಲದೇ ಇಂಗ್ಲೆಂಡ್, ಅಮೇರಿಕ, ನ್ಯೂಜಿಲ್ಯಾಂಡ್, ಆಸ್ಟ್ರೇಲಿಯಾ ಹಾಗೂ ಅರಬ್ ರಾಷ್ಟ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವುದು ಕಾಣಬಹುದು.

ಪ್ರೊ. ಎಂ. ಅಬ್ದುಲ್ ರೆಹಮಾನ್ ಕೇರಳದ ಕಣ್ಣೂರು ಹಾಗೂ ಕಲ್ಲಿಕೋಟೆ ವಿಶ್ವವಿದ್ಯಾನಿಲಯದ ನಿವೃತ್ತ ಕುಲಪತಿಗಳಾಗಿದ್ದು, ಪರಿಸರ ವಿಜ್ಞಾನದಲ್ಲಿ ಹಲವು ಪ್ರಶಸ್ತಿಗಳನ್ನು ಪಡೆದವರಾಗಿದ್ದಾರೆ. ಕರ್ನಾಟಕದ ದಕ್ಷ ಐ.ಎ.ಎಸ್. ಅಧಿಕಾರಿ ಹಾಗೂ ಮಾಜಿ ದಕ್ಷಿಣ ಕನ್ನಡ ಜಿಲ್ಲಾಧಿಕಾರಿ ಎ.ಬಿ. ಇಬ್ರಾಹಿಂ, ಶೈಕ್ಷಣಿಕ ರಂಗದಲ್ಲಿ ಉನ್ನತ ಹುದ್ದೆಯಲ್ಲಿದ್ದು ಇದೀಗ ನಿವೃತ್ತರಾದ ಪ್ರೊ. ಇಬ್ರಾಹಿಂ ಬ್ಯಾರಿ ಅನೇಕ ಶೈಕ್ಷಣಿಕ ಗ್ರಂಥಗಳು ರಾಷ್ಟ್ರದ ವಿವಿಧ ವಿಶ್ವವಿದ್ಯಾನಿಲಯಗಳಿಂದ ಅಂಗೀಕೃತ ಪಠ್ಯ ಪುಸ್ತಕಗಳ ಲೇಖಕರಾಗಿದ್ದಾರೆ.

'ಮಾನವ ಮೈತ್ರಿಗಾಗಿ ರಕ್ತದಾನ' ಎಂಬ ಧ್ಯೇಯ ವಾಕ್ಯದೊಂದಿಗೆ ಕಳೆದ 15 ವರ್ಷಗಳಿಂದ ರಾಜ್ಯದಲ್ಲಿ ದಾಖಲಾರ್ಹ ಪ್ರಮಾಣದ ರಕ್ತ ಸಂಗ್ರಹ ಮಾಡಿ ಮಾನವೀಯ ಸೇವೆ ಸಲ್ಲಿಸುತ್ತಿರುವ ಎಂ.ಬಿ. ಅಬ್ದುಲ್ ರೆಹಮಾನ್ ಇವರ ಸಂಚಾಲಕತ್ವದ ಬ್ಲಡ್, ಬ್ರೈನ್ ಮತ್ತು ಬಯೋ ಬ್ಯಾಂಕಿಂಗ್ ಟ್ರಸ್ಟ್‌ನ ಪ್ರಧಾನ ಕಛೇರಿ ಮಂಗಳೂರಿನಲ್ಲಿವೆ. 21

ಪ್ರಖ್ಯಾತ ಸ್ಕ್ರೀನ್ ಹಾಗೂ ಫಿಲ್ಮ್ ಫೇರ್ ಪತ್ರಿಕೆಗಳ ಸಂಪಾದಕ, ಝೀ ಸಿನೆಮಾದ ಮುಖ್ಯಸ್ಥರಾಗಿದ್ದ ರವೂಫ್ ಅಹ್ಮದ್, ಛಾಯಾ ಗ್ರಾಹಕ, ವರ್ಣ ಚಿತ್ರ ಕಲಾವಿದ ಅಂತರಾಷ್ಟ್ರೀಯ ಮಟ್ಟದಲ್ಲಿ ಹಲವು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದ ಖ್ಯಾತ ದಂತ ವೈದ್ಯ ಡಾ. ಅಖ್ತರ್ ಹುಸೇನ್, ದಕ್ಷ ಐ.ಪಿ.ಎಸ್ ಅಧಿಕಾರಿ ಅಬ್ದುಲ್ ಅಹಮ್ಮದ್ ಪುತ್ತಿಗೆ, ನಿವೃತ್ತ ಪೋಲೀಸ್ ಅಧಿಕಾರಿಗಳಾದ ಇಬ್ರಾಹಿಂ ಮತ್ತು ಜಿ.ಎ. ಬಾವ, ಅನಿವಾಸಿ ಗಲ್ಫ್ ಭಾರತೀಯನೆಂದು ಸ್ಥಾನ ಪಡೆದ ಗಲ್ಫ್ ಮೆಡಿಕಲ್ ಯುನಿವರ್ಸಿಟಿ ಮತ್ತು ಕಾಲೇಜುಗಳ ಸಂಸ್ಥಾಪಕ ಇತ್ತೀಚೆಗೆ ಗಲ್ಫ್ ಮೆಡಿಕಲ್ ಯುನಿವರ್ಸಿಟಿಯಿಂದ ಡಾಕ್ಟರೇಟ್ ಪದವಿ ಪಡೆದ ಡಾ. ಮೊೈದಿನ್ ಹಾಜಿ ತುಂಬೆ, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರಾಗಿ ಸೇವೆ ಸಲ್ಲಿಸಿರುವ ಮಹಮ್ಮದ್ ನಝೀರ್, ರಾಷ್ಟ್ರಮಟ್ಟದಲ್ಲಿ ಮನ್ನಣೆ ಪಡೆದ ಖ್ಯಾತ ವ್ಯಂಗ ಚಿತ್ರಕಾರ ಪಿ. ಮಹಮ್ಮದ್ ಚಾರ್ಮಾಡಿ ಘಾಟಿಯಲ್ಲಿ ಪ್ರಯಾಣಿಕರಿಗೆ ಆಪತ್ಬಾಂದವನಾಗಿ ರಾಜ್ಯ ಪ್ರಶಸ್ತಿ ಪಡೆದ ಹಸನಬ್ಬ ಚಾರ್ಮಾಡಿ ಹಾಗೂ ಕಿತ್ತಾಳೆ ಹಣ್ಣು ಮಾರಿ ತನ್ನ ಊರಿಗೆ ಶಾಲೆಯನ್ನು ನಿರ್ಮಿಸಿ ಅಕ್ಷರ ಸಂತನಾಗಿ ಸಮಾಜ ಸೇವಕನಾಗಿ ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡಿರುವ ಹರೇಕಳ ಹಾಜಬ್ಬ ಹಾಗೂ ವೈದ್ಯಕೀಯ ಹಾಗೂ ಮಾಹಿತಿ ತಂತ್ರಜ್ಞಾನದಲ್ಲಿ ಉನ್ನತ ಶಿಕ್ಷಣ ಪಡೆದು ಸಂಶೋಧನ ನಿರತರಾಗಿರುವ ಬಹಳಷ್ಟು ಮಂದಿ ಯುವ ವಿಜ್ಞಾನಿಗಳು ಮತ್ತು ವೈದ್ಯರು ಬ್ಯಾರಿಗಳಾಗಿದ್ದಾರೆ.22

ಇಂದು ಸರ್ಕಾರಿ ಮತ್ತು ಖಾಸಗಿ ವಲಯದಲ್ಲಿ ಉನ್ನತ ಹುದ್ದೆಯಲ್ಲಿದ್ದಕೊಂಡು ಸೇವೆ ಸಲ್ಲಿಸುತ್ತಿರುವ ಬಹುತೇಕ ಜನ ಬ್ಯಾರಿಗಳು ತಮ್ಮ ಜನಾಂಗದ ಅಭಿವೃದ್ಧಿಗೆ ಮತ್ತು ಜಿಲ್ಲೆಯ ಪ್ರಗತಿಗೆ ವಿಶೇಷವಾಗಿ ತಮ್ಮದೇ ಆದ ಕೊಡುಗೆಯನ್ನು ನೀಡುತ್ತಿರುವುದು ಪ್ರಶಂಸನೀಯವಾಗಿದೆ.

ವೈದ್ಯಕೀಯ ಹಾಗೂ ತಾಂತ್ರಿಕ ಶಿಕ್ಷಣ ಸಂಸ್ಥೆಗಳು ನಡೆಸುತ್ತಿರುವ ಜಿಲ್ಲೆಯ ಬ್ಯಾರಿಗಳು ಮುಖ್ಯವಾಗಿ ಮುಸ್ಲಿಂ ಎಜುಕೇಶನ್ ಟ್ರಸ್ಟ್, ಯೆನಪೋಯ ಫೌಂಡೇಶನ್, ತುಂಬೆ ಎಜುಕೇಶನ್ ಟ್ರಸ್ಟ್ ಮತ್ತು ಗಲ್ಫ್ ಮೆಡಿಕಲ್ ಯೂನಿವರ್ಸಿಟಿ, ಬದ್ರಿಯಾ ವಿದ್ಯಾ ಸಂಸ್ಥೆ, ಇಸ್ಲಾಹೀ ಎಜುಕೇಶನ್ ಟ್ರಸ್ಟ್, ಫಲಾಹ್ ಎಜುಕೇಶನ್ ಟ್ರಸ್ಟ್, ಕಣಂಚೂರು ಅಕಾಡೆಮಿ ಆಫ್ ಜನರಲ್ ಎಜುಕೇಶನ್ ಆ್ಯಂಡ್ ಮೆಡಿಕಲ್ ಎಜುಕೇಶನ್, ಹೀರಾ ಉಮೆನ್ಸ್ ಮತ್ತು ಸೈನ್ಸ್ ಕಾಲೇಜು, ಬೆಂಗಳೂರಿನ ಪ್ರೆಸಿಡೆನ್ಸಿ ಆಂಗ್ಲ ಮಾಧ್ಯಮ ಶಾಲೆ, ಪುತ್ತೂರಿನ ಅನ್ಸಾರುದ್ದೀನ್ ಎಜುಕೇಶನ್ ಟ್ರಸ್ಟ್, ಅಲ್ ಬದ್ರಿಯಾ ಶಿಕ್ಷಣ ಸಂಸ್ಥೆ, ದಿ ಕ್ಯಾಂಪಸ್ ಕೆರಿಯರ್ ಅಕಾಡೆಮಿ ಮುಂತಾದ ಜಿಲ್ಲೆಯ ಪ್ರಮುಖ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳನ್ನು ನಡೆಸುತ್ತಿರುವ ನೂರಕ್ಕೂ ಅಧಿಕ ಶಿಕ್ಷಣ ಸಂಸ್ಥೆಗಳು ಬ್ಯಾರಿಗಳ ಮಾಲಕತ್ವದಲ್ಲಿ ಮತ್ತು ಆಧುನಿಕ ಶಿಕ್ಷಣ ಕ್ಷೇತ್ರಕ್ಕೆ ನೀಡುತ್ತಿರುವ ವಿಶೇಷ ಕಾಣಿಕೆಯಾಗಿದೆ. 23

ಭಾರತದ ಇತಿಹಾಸದಲ್ಲಿ ಮಧ್ಯಕಾಲಿನ ಭಾರತದ ಇತಿಹಾಸ ಭಾರತೀಯ ಮುಸಲ್ಮಾನರಿಗೆ ಬಹಳ ಮುಖ್ಯವಾದ ಕಾಲವಾಗಿದೆ. ಅಲ್ಲಿಯವರೆಗೆ ವ್ಯಾಪಾರ ವಾಣಿಜ್ಯ ಹಾಗೂ ಇತರ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದ ಮುಸ್ಲಿಮರಿಗೆ ಭಾರತದಲ್ಲಿ ಹೊಸ ಮುಸ್ಲಿಂ ಅಡಳಿತವು ದೆಹಲಿ ಸುಲ್ತಾನರ ಮೂಲಕ ಆರಂಭವಾಗಿ 18ನೇ ಶತಮಾನದ ಮಧ್ಯಭಾಗದವರೆಗೂ ಉತ್ತರ ಮತ್ತು ದಕ್ಷಿಣ ಭಾರತದ ಆಡಳಿತದಲ್ಲಿ ತಮ್ಮ ಪ್ರಭಾವವನ್ನು ಬೀರಿದ್ದರು. ಒಂದು ಕಾಲದಲ್ಲಿ ಭಾರತ ರಾಜಕೀಯ ಚುಕ್ಕಾಣಿಯನ್ನು ಹಿಡಿದಿದ್ದ ಮುಸ್ಲಿಮರಿಗೆ ರಾಜಕೀಯ ಅನುಭವ ಮತ್ತು ತಮ್ಮ ಪೂರ್ವಿಕರು ರಾಜಕೀಯದಲ್ಲಿ ಹೊಂದಿದ್ದ ಹಿಡಿತ 18ನೇ ಶತಮಾನದಲ್ಲಿ ಬ್ರಿಟೀಷರು ತಮ್ಮ ಪ್ರಾಬಲ್ಯವನ್ನು ಪಡೆಯುವುದರೊಂದಿಗೆ ಆಡಳಿತದಿಂದ ಕಡೆಗಣಿಸಲ್ಪಟ್ಟರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1200 ವರ್ಷಗಳ ಕಾಲ ನೆಲೆಸಿ ಇತಿಹಾಸವನ್ನು ಹೊಂದಿರುವ ಬ್ಯಾರಿ ಜನಾಂಗ ರಾಜಕೀಯವಾಗಿ ತಮ್ಮನ್ನು ಈ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳಲು ದಶಕಗಳೇ ಕಳೆದವು. ಇದಕ್ಕೆ ಮುಖ್ಯ ಕಾರಣ ಬ್ರಿಟೀಷರ ಆಗಮನ ಸಂದರ್ಭದಲ್ಲಿ ಮಂಗಳೂರಿನ ಮುಸ್ಲಿಮರು ವ್ಯಾಪಾರ ಮತ್ತು ವಾಣಿಜ್ಯದ ಮುಖ್ಯ ಅಂಗವಾಗಿದ್ದು ಅದನ್ನು ಉಳಿಸುವ ಪ್ರಯತ್ನಕ್ಕಾಗಿ ಬ್ರಿಟೀಷರ ಜೊತೆಗೆ ಸ್ನೇಹವನ್ನು ಪಡೆಯಲು ಆರಂಭಿಸಿದರು. ವ್ಯಾಪಾರವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿ ಬ್ರಿಟೀಷ್ ಬೆಂಬಲಿಗರಾಗಿ ಅವರ ಬಿರುದು ಸನ್ಮಾನಗಳಿಗೆ ಪಾತ್ರರಾದರು. ಹೀಗಾಗಿ ರಾಜಕೀಯ ಅನುಭವ ದೊರೆಯದೆ ಧಾರ್ಮಿಕ ಕಟ್ಟಳೆಗಳನ್ನು ಪಾಲಿಸುತ್ತಾ ತಮ್ಮ ಸ್ಥಾನಮಾನಗಳ ರಕ್ಷಣೆಗೆ ಗಮನ ಹರಿಸಿದರು. 24

1830-31 ರಲ್ಲಿ ಜಿಲ್ಲೆಯಲ್ಲಿ ಉಂಟಾದ ಕ್ಷಾಮದ ಸಂದರ್ಭದಲ್ಲಿ ಮುಸ್ಲಿಂ ನಾಯಕರು ಬಡವರ ರಕ್ಷಣೆಗೆ ಮುಂದಾಗದಿದ್ದಾಗ ಬ್ರಿಟೀಷ್ ಅಧಿಕಾರಿಗಳು ಅವಶ್ಯಕತೆಗಳನ್ನು ಪೂರೈಸಿದರು. ಇದು ಬ್ಯಾರಿಗಳಲ್ಲಿದ್ದ ಶ್ರೀಮಂತ ಮತ್ತು ಬಡವರ ಮಧ್ಯೆ ಬಿರುಕು ಉಂಟಾಗಲು ಕಾರಣವಾಯಿತು.

1799 ರಲ್ಲಿ ಮಂಗಳೂರನ್ನು ವಶಪಡಿಸಿಕೊಂಡ ಬ್ರಿಟೀಷರು ತಮ್ಮ ಸೇನಾ ಶಿಬಿರವಾಗಿ ಮಾಡಿದರು. ಕೆಲವು ಆರೋಪ ತಕರಾರುಗಳ ಸಂದರ್ಭದಲ್ಲಿ ಬ್ರಿಟೀಷರು ಮುಸ್ಲಿಂ ನಾಯಕರನ್ನು, ಜನರನ್ನು ಓಲೈಸುವ ಉದ್ದೇಶದಿಂದ ಮುಸ್ಲಿಂ ಮುಫ್ತಿಗಳನ್ನು ನ್ಯಾಯಾಧಿಪತಿಗಳನ್ನಾಗಿ ಮಾಡಿ ಅವರನ್ನು ಸದರ್ ಅಮೀರಾಗಿಯೂ ನೇಮಕ ಮಾಡಿದರು. 1855 ರಲ್ಲಿ ಸ್ಥಳೀಯ ಹಣಕಾಸು ಮಂಡಳ ಸ್ಥಾಪಿಸಿ ಮುಸ್ಲೀಮರಿಗೆ ಪ್ರಾತಿನಿತ್ಯ ನೀಡಿದರು. 1866 ರಲ್ಲಿ ಮಂಗಳೂರಲ್ಲಿ ಮುನ್ಸಿಪಲ್ ಕೌನ್ಸಿಲ್ ಆರಂಭವಾದಾಗ ಅದೊಂದು ರಾಜಕೀಯ ಸ್ಥಳೀಯ ಆಡಳಿತ ವ್ಯವಸ್ಥೆ ಎಂದು ಅರಿವು ಜನರಿಗೆ ಇರದೆ ಹಲವು ಮುಸ್ಲಿಂ ಸೇಟ್‌ಗಳನ್ನು ಕಮಿಷನರ್‌ಗಳಾಗಿ ನೇಮಿಸಿದರು. ಖಾನ್ ಬಹದ್ದೂರ್ ಬಾವ ಹಾಜಿಯವರನ್ನು ಸುಧಾರಕರೆಂಬ ನೆಲೆಯಲ್ಲಿ ಮುನ್ಸಿಪಲ್ ಕೌನ್ಸಿಲ್ ಸದಸ್ಯರಾಗಿ ಮಾಡಿ ಖಾನ್ ಬಹುದ್ದೂರ್ ಬಿರುದು ನೀಡಿದರು. ಈ ರೀತಿಯಾಗಿ 1914 ರವರೆಗೆ ಬ್ಯಾರಿಗಳಿಗೆ ರಾಜಕೀಯ ಆಸಕ್ತಿ ಇರದೇ ಶ್ರೀಮಂತ ವರ್ತಕರು ಮತ್ತು ರೈತ ಸಾಹುಕಾರರು, ಬ್ರಿಟೀಷರ ಪರವಾಗಿ ಇದ್ದ ಕಾಲದಲ್ಲಿ ಮಹಮ್ಮದ್ ಶೇರೂಲ್ ಮತ್ತು ಮಹಮ್ಮದ್ ಶೆಮ್ನಾಡ್ ಮುಸ್ಲಿಂ ನಾಯಕರು ರಾಜಕೀಯ ಮಹತ್ವವನ್ನು ತಮ್ಮ ಸಮುದಾಯಕ್ಕೆ ನೀಡಿದರು. ಇದಕ್ಕೆ ಪೂರಕವಾಗಿ 1930 ರಲ್ಲಿ ಮಂಗಳೂರಿಗೆ ಮುಸ್ಲಿಂ ಲೀಗ್ ಪ್ರವೇಶವಾಗಿ ಸಂಘಟಿಸಿದರು. ಹಳ್ಳಿಗಳಲ್ಲಿ ಕಾಂಗ್ರೇಸ್ ಬೇರೂರಿತು. 1936 ರಲ್ಲಿ ಸೌಕತ್ ಆಲಿ ಮಂಗಳೂರಿಗೆ ಬಂದಂತಹ ಸಂದರ್ಭದಲ್ಲಿ ಅದ್ದೂರಿಯ ಸ್ವಾಗತ ದೊರಕಿತು. 1945 ರಲ್ಲಿ ಶೇರೂಲ್ ಮತ್ತು ಮಹಮ್ಮದ್ ಶೆಮ್ನಾಡ್ ಮುಸ್ಲಿಂ ಲೀಗ್‌ಗೆ ಸೇರ್ಪಡೆಯಾದಾಗಲೂ ಪ್ರಭಾವವನ್ನು ಬೀರಲಿಲ್ಲ.25

ಇಂದು ಜಿಲ್ಲೆಯ ರಾಜಕೀಯದಲ್ಲಿ ಅತ್ಯಂತ ಹೆಚ್ಚಿನ ಪ್ರಭಾವವನ್ನು ಬೀರಿರುವ ಬ್ಯಾರಿಗಳು ಜಿಲ್ಲೆಯ ರಾಜಕೀಯದಲ್ಲಿ ಅತ್ಯಂತ ರಾಜಕೀಯ ಪ್ರಜ್ಞೆ ಯುಳ್ಳವರು ಸದಾ ಸಕ್ರೀಯರಾಗಿದ್ದು ಬ್ಯಾರಿಗಳು ಹೆಚ್ಚಾಗಿರುವ ಪ್ರದೇಶದಲ್ಲಿ ಪ್ರತೀ ಚುನಾವಣೆಯಲ್ಲಿ ಅತೀ ಹೆಚ್ಚು ಮತದಾನದ ದಾಖಲೆಗಳನ್ನು ಸಾಬೀತುಗೊಳಸಿದರೆ, ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚಿನ ಪ್ರತಿನಿಧಿಗಳನ್ನು ಕಂಡರು. ರಾಜ್ಯ ಮತ್ತು ರಾಷ್ಟ್ರದ ರಾಜಕೀಯದಲ್ಲೂ ತಮ್ಮ ಪ್ರಾಬಲ್ಯವನ್ನು ಮರೆತಿರುವುದು ಹೆಮ್ಮೆಯ ಸಂಗತಿ. ಲೋಕಸಭಾ ಉಪ ಸ್ಪೀಕರ್ ಆಗಿದ್ದ ಪಿ. ಎಂ. ಸಯೀದ್ ರವರು ರಾಷ್ಟ್ರದ ರಾಜಕೀಯದಲ್ಲಿ ಅತ್ಯುನ್ನತ ಪದವಿ ಪಡೆದ ಪ್ರಥಮ ಬ್ಯಾರಿ ಸಮುದಾಯದ ರಾಜಕಾರಣಿ ಕೇಂದ್ರ ಸಚಿವ ಹಾಗೂ ಹಾಲಿ ಯೋಜನ ಆಯೋಗದ ಉಪಾಧ್ಯಕ್ಷರು ಆಗಿರುವ ಸಿ.ಎಂ. ಇಬ್ರಾಹಿಂ, ಕರ್ನಾಟಕ ಸರಕಾರದಲ್ಲಿ ಪ್ರಸ್ತುತವಾಗಿ ಸಚಿವರಾಗಿ ಸೇವೆ ಸಲ್ಲಿಸುತ್ತಿರುವ ಮಾಜಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವ ಬಿ.ಎ. ಮೊಹಿದ್ದೀನ್ ಹಾಲಿ ಶಾಸಕ ಬಿ.ಎ. ಮೊಹಿದ್ದೀನ್ ಬಾವಾ, ಮಾಜಿ ಉಳ್ಳಾಲ ಕ್ಷೇತ್ರದ ಸಾಸಕ ಯು.ಟಿ.ಫರೀದ್, ಮಾಜಿ ಶಾಸಕ ಬಿ.ಎಂ. ಇದಿನಬ್ಬ ರಾಜ್ಯ ಸಭಾ ಸದಸ್ಯ ಬಿ. ಇಬ್ರಾಹಿಂ ಮಾಜಿ ಮುಖ್ಯ ಸಚೇತರ್ ನಯೀಮ್ ಅಹ್ಮದ್, ಮಾಜಿ ವಿಧಾನ ಸಭಾ ಪರಿಷತ್ ಸದಸ್ಯ ಬಿ.ಎ. ಹಸನಬ್ಬ ಮಡಿಕೇರಿ, ಮಂಗಳೂರಿನ ಪ್ರಥಮ ಮೇಯರ್ ಹಾಜಿ ಅಬ್ದುಲ್ ಖಾದರ್ ಹಾಗೂ ಪ್ರಾದೇಶಿಕ ಮಟ್ಟದಲ್ಲಿ ಹೆಸರುವಾಸಿಯಾದ ರಾಜಕಾರಣಿಗಳಾಗಿರುವ ಎಂ.ಎ. ಗಫೂರ್ ಉಡುಪಿ, ಇಬ್ರಾಹಿಂ ಕೋಕಿಜಾಲ್, ಮಾಜಿ ಮೇಯರ್ ಕೆ. ಅಶ್ರಫ್, ಮೊದಲಾದವರು ಸ್ಥಳೀಯರಾಗಿದ್ದು, ಜಿಲ್ಲಾ ಮತ್ತು ಗ್ರಾಮ ಮತ್ತು ಚಟುವಟಿಕೆಗಳಲ್ಲಿ ಅಧ್ಯಕ್ಷ, ಉಪಾಧ್ಯಕ್ಷ, ಸ್ಥಾನವನ್ನು ವಿವಿಧ ಭಾಗಗಳಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಹಲವು ಬ್ಯಾರಿ ರಾಜಕೀಯ ನಾಯಕರನ್ನು ಗುರುತಿಸಬಹುದು.26

**ಪರಾಮರ್ಶನ ಗ್ರಂಥಗಳು :-**

1. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು–ಪುಟ ಸಂಖ್ಯೆ – 30

2. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 153

3. ಅದೇ – ಪುಟ ಸಂಖ್ಯೆ – 154

4. ಅದೇ – ಪುಟ ಸಂಖ್ಯೆ – 155

5. ಅದೇ – ಪುಟ ಸಂಖ್ಯೆ – 156

6. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು–ಪುಟ ಸಂಖ್ಯೆ – 180

7. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 91

8. ಹಂಝುಮಲಾರ್ –ಮಂಗಳೂರು ದರ್ಶನ – ಸಂಪುಟ–೩ – ಪುಟ ಸಂಖ್ಯೆ 760

9. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 172

ಬಿ.ಎ. ಮಹಮ್ಮದ್ ಹನೀಫ್ – ಬ್ಯಾರಿ ಆಂದೋಲನದ ಹೆಜ್ಜೆಗಳು – ಪುಟ ಸಂಖ್ಯೆ–18

10. ಬಿ.ಎ. ಮಹಮ್ಮದ್ ಹನೀಫ್ – ಬ್ಯಾರಿ ಆಂದೋಲನದ ಹೆಜ್ಜೆಗಳು – ಪುಟ ಸಂಖ್ಯೆ–18

11. ಡಾ.ಕೆ.ಎಂ. ಲೋಕೇಶ್ – ಪೆರಿಮೆ – ಪುಟ ಸಂಖ್ಯೆ – 19

12. ಅದೇ – 20

13. ಅದೇ – ಪುಟ ಸಂಖ್ಯೆ – 21

14. ಅದೇ – ಪುಟ ಸಂಖ್ಯೆ – 22

15. ಅದೇ – ಪುಟ ಸಂಖ್ಯೆ – 22

16. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 163

17. ಅದೇ – ಪುಟ ಸಂಖ್ಯೆ – 164

18. ಬಿ.ಎ. ಮಹಮ್ಮದ್ ಹನೀಫ್ – ಬ್ಯಾರಿ ಆಂದೋಲನದ ಹೆಜ್ಜೆಗಳು – ಪುಟ ಸಂಖ್ಯೆ–18

19. ಅದೇ – ಪುಟ ಸಂಖ್ಯೆ–19

20. ಬಿ.ಎ. ಮಹಮ್ಮದ್ ಹನೀಫ್ – ಬ್ಯಾರಿ ಆಂದೋಲನದ ಹೆಜ್ಜೆಗಳು – ಪುಟ ಸಂಖ್ಯೆ–20

21. ಪ್ರೊ. ಬಿ.ಎಂ. ಇಚ್ಲಂಗೋಡು – ತುಳುನಾಡ ಬ್ಯಾರಿಗಳು – ಪುಟ ಸಂಖ್ಯೆ – 164

22. ಅಬ್ದುಲ್ ರಹೀಮ್ ಟಿ.ಕೆ. – ಮಂಗಳೂರು ದರ್ಶನ – ಸಂಪುಟ ೩ – ಪುಟ ಸಂಖ್ಯೆ 758

ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು–ಪುಟ ಸಂಖ್ಯೆ – 130

ಅದೇ –ಪುಟ ಸಂಖ್ಯೆ – 153

23. ಡಾ.ಎನ್. ಇಸ್ಮಾಯಿಲ್ – ಮಂಗಳೂರು ದರ್ಶನ – ಸಂಪುಟ ೩ – ಪುಟ ಸಂಖ್ಯೆ 651

24. ಡಾ. ವಹಾಬ್ ದೊಡ್ಡಮನೆ – ತುಳುನಾಡ ಮುಸ್ಲಿಮರು–ಪುಟ ಸಂಖ್ಯೆ – 106

25. ಪ್ರೊ. ಬಿ.ಎಂ. ಇಚ್ಲಂಗೋಡು – ಮಂಗಳೂರು ದರ್ಶನ ೧ – ಪುಟ ಸಂಖ್ಯೆ –241

ಡಾ.ಕೆ.ಎಂ. ಲೋಕೇಶ್ – ಪೆರಿಮೆ – ಪುಟ ಸಂಖ್ಯೆ – 18

26. ಅಬ್ದುಲ್ ರಹೀಮ್ ಟಿ.ಕೆ. – ಮಂಗಳೂರು ದರ್ಶನ – ಸಂಪುಟ ೩ – ಪುಟ ಸಂಖ್ಯೆ –760

**ಉಪಸಂಹಾರ:-**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಪ್ರಮುಖ ಜನಾಂಗಗಳಲ್ಲಿ ಒಂದಾಗಿರುವ ಬ್ಯಾರಿ ಸಮುದಾಯವು ಐತಿಹಾಸಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ತನ್ನದೇ ಆದ ಪ್ರಬಲವಾದ ಅಸ್ತಿತ್ವವನ್ನು ಹೊಂದಿದೆ. ಅರೇಬಿಯಾನ್ ವರ್ತಕರು ವಾಣಿಜ್ಯ ಮತ್ತು ವ್ಯಾಪಾರ ಉದ್ದೇಶದಿಂದ ಈ ತುಳುನಾಡಿನಲ್ಲಿ ತಮ್ಮ ಇರುವಿಕೆಯನ್ನು ಸುಮಾರು 1300 ವರ್ಷಗಳಗಿಂತ ಹಿಂದೆಯೇ ಇದ್ದರೆಂದು ಅಧ್ಯಯನಕಾರರು ಗುರುತಿಸಿಕೊಂಡಿದ್ದಾರೆ. 7ನೇ ಶತಮಾನದಲ್ಲಿ ಭಾರತಕ್ಕೆ ಇಸ್ಲಾಂ ಧರ್ಮ ದೀನಾರ್ ಮಿಶನರಿಗಳ ಮೂಲಕ ಪ್ರಚಾರಗೊಳ್ಳುವುದರೊಂದಿಗೆ ಈ ದೇಶದ ಮಣ್ಣಿನಲ್ಲಿ ಇಸ್ಲಾಂ ಧರ್ಮದ ಬೀಜ ಬಿತ್ತಲಾಯಿತು. ಹೀಗೆ ಅರಬ್ ವರ್ತಕರು ವ್ಯಾಪಾರದ ದೃಷ್ಟಿಯಿಂದ ಈ ನಾಡಲ್ಲಿ ತಮ್ಮನ್ನು ಗುರುತಿಸಿದ್ದು ಕ್ರಮೇಣ ನಾನಾ ಕಾರಣಗಳಿಂದಾಗಿ ಇಲ್ಲೇ ನೆಲೆಸಲು ಆರಂಭಿಸಿದರು. ಹೀಗೆ ನೆಲೆಸಿದ ಅರಬರು ಸ್ಥಳೀಯ ಮಹಿಳೆಯರನ್ನು ವಿವಾಹವಾಗುವುದರೊಂದಿಗೆ ಕರಾವಳಿ ಕರ್ನಾಟಕದ ತುಳುನಾಡಿನಲ್ಲಿ ತಮ್ಮ ಸಂತಾನವನ್ನು ವೃದ್ಧಿಸತೊಡಗಿದರು. ಈ ರೀತಿ ಅರೇಬಿಯಾನ್ ತಂದೆ ಹಾಗೂ ಸ್ಥಳೀಯ ತಾಯಿಗೆ ಜನ್ಮ ಪಡೆದ ಜನಾಂಗದ ಮುಸ್ಲಿಮರನ್ನು ಬ್ಯಾರಿ ಸಮುದಾಯದವರೆಂದು ಕರೆಯಲಾಗಿದ್ದು ಈ ಸಮುದಾಯ ದೇಶಕ್ಕೆ, ರಾಜ್ಯಕ್ಕೆ ಹಾಗೂ ಜಿಲ್ಲೆಯ ಪ್ರಗತಿಗೆ ಹಲವು ವರ್ಷಗಳಿಂದಲೇ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡುತ್ತಾ ಬಂದಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಲವಾರು ವರ್ಷಗಳಿಂದ ನೆಲೆಸಿ ದೀರ್ಘ ಇತಿಹಾಸವನ್ನು ಹೊಂದಿರುವ ಈ ಸಮುದಾಯವು ಕೆಲವು ದಶಕಗಳನ್ನು ಹೊರತುಪಡಿಸಿದರೆ ಹಲವು ವರ್ಷಗಳಷ್ಟು ಕಾಲ ಈ ದೇಶದ ಇತಿಹಾಸದಲ್ಲಿ ತನ್ನ ಗುರುತಿಸುವಿಕೆಯನ್ನು ಮರೆಮಾಚಿ ಸಂಶೋಧಕರು, ಇತಿಹಾಸಕಾರರು ಹಾಗೂ ಲೇಖಕರು, ಸಮಾಜಶಾಸ್ತ್ರಜ್ಞರ ಕಣ್ಣಿನಿಂದ ಕಣ್ಮರೆಯಾಗಿದ್ದರು ಇತ್ತೀಚಿನ ದಶಕದಲ್ಲಿ ಈ ಸಮುದಾಯದ ಕುರಿತು ಇತಿಹಾಸಕಾರರಾದ ಪ್ರೋ.ಬಿ.ಎಂ. ಇಚ್ಲಂಗೋಡು, ಡಾ.ವಹಾಬ್ ದೊಡ್ಡಮನೆ, ಭಾಷಾ ಶಾಸ್ತ್ರಜ್ಞರಾದ ಡಾ.ಯು.ಪಿ. ಉಪಾಧ್ಯಾಯ ಮತ್ತು ಡಾ. ಸುಶೀಲಾ ಉಪಾಧ್ಯಾಯ, ಡಾ.ಕೆ.ಎಂ.ಲೋಕೇಶ್ ಮತ್ತು ಡಾ.ಕೆ.ಜಿ. ವಸಂತ ಮಾಧವರಂತಹ ಪ್ರಮುಖರು ಅಧ್ಯಯನ ನಡೆಸಿ ಈ ಸಮುದಾಯದ ಭಾಷೆ, ಲಿಪಿ, ಸಂಸ್ಕೃತಿ ಹಾಗೂ ಸಾಮಾಜಿಕ ಜೀವನದ ಕುರಿತಾಗಿ ಹಲವು ಮಾಹಿತಿಗಳನ್ನು ತಮ್ಮ ಅಧ್ಯಯನದಲ್ಲಿ ವ್ಯಕ್ತಪಡಿಸಿದ್ದಾರೆ.

ಈ ಸಮುದಾಯದ ಇತಿಹಾಸವನ್ನು ತಿಳಿಯಲು ತುಳುನಾಡಿನ ಪ್ರಮುಖ ಶಾಸನಗಳು ದೇಶೀ ಹಾಗೂ ವಿದೇಶಿ ಬರವಣಿಗೆಗಳು, ಕೈಫಿಯತ್ತ್, ಪ್ರಕಟಿತ ಮತ್ತು ಅಪ್ರಕಟಿತ ದಾಖಲೆಗಳು ವಿಪುಲವಾಗಿ ದೊರೆಯದಿದ್ದರು ಇತಿಹಾಸಕ್ಕೆ ಸಂಬಂಧಿಸಿದಂತೆ ಈ ಸಮುದಾಯಕ್ಕೆ ಕುರಿತಾಗಿ ಹಲವು ಮೂಲ ಮತ್ತು ಉಪ ದಾಖಲೆಗಳು ವಿರಳವಾಗಿ ಲಭ್ಯವಿದ್ದು ಅವುಗಳನ್ನು ಅವಲೋಕನ ಮಾಡುವುದರೊಂದಿಗೆ ಈ ಸಮುದಾಯದ ಕುರಿತಾಗಿ ಸಮಗ್ರವಾದ ಒಂದು ಚಾರಿತ್ರಿಕ ಅವಲೋಕನವನ್ನು ಕೈಗೊಳ್ಳಲಾಗಿದೆ.

ಈ ಪ್ರಮುಖ ಆಧಾರಗಳಲ್ಲಿ ಯಾವ ರೀತಿ ಎನ್ನುವುದರ ಕುರಿತಾಗಿ ಅಧ್ಯಯನ ಮಾಡಲಾಗಿದೆ. ಹಾಗೂ ಈ ಸಮುದಾಯವು ಕೇವಲ 1300 ಅಥವಾ ಅದಕ್ಕಿಂತಲೂ ದೀರ್ಘವಾದ ಇತಿಹಾಸವನ್ನು ಹೊಂದಿದೆಯೆನ್ನುವುದರ ಕುರಿತಾಗಿ ಸ್ಪಷ್ಟವಾದ ಅಭಿಪ್ರಾಯವನ್ನು ಯಾವುದೇ ಸಂಶಯವಿಲ್ಲದೇ ಒಪ್ಪಿಕೊಳ್ಳಬಹುದು. ಆದರೂ ಹೆಚ್ಚಿನ ಸಂಶೊಧನೆ ಹಾಗೂ ಅಧ್ಯಯನಕ್ಕೆ ಲಭ್ಯವಿರುವ ಹೆಚ್ಚಿನ ದಾಖಲೆಗಳು ಬ್ರಿಟಿಷ್ ಮತ್ತು ಪೋರ್ಚುಗಲ್ ಕಾಲದಲ್ಲಿ ಲಭ್ಯವಿದ್ದು ಈ ರಾಷ್ಟ್ರಗಳು ಗ್ರಂಥಾಲಯ ಹಾಗೂ ಸಂಗ್ರಹಾಲಯಗಳಲ್ಲಿ ಲಭ್ಯವಿದ್ದು ಹೆಚ್ಚಿನ ಅಧ್ಯಯನಕ್ಕೆ ಅವಕಾಶವಿದೆ.

ಈ ಅಧ್ಯಯನದಲ್ಲಿ ಈ ಸಮುದಾಯದ ಮೂಲಕ ಕುರಿತಾಗಿ ಚಿಂತಕರು, ಇತಿಹಾಸಕಾರರು ಹಾಗೂ ಲೇಕಕರ ಮಧ್ಯೆ ವಿವಿಧ ರೀತಿಯ ಅನುಮಾನಗಳಿದ್ದು ಈ ಕರಾವಳಿ ಕರ್ನಾಟಕದಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಯಲ್ಲಿ ತೊಡಗಿಸಿಕೊಂಡು ಇಲ್ಲಿನ ಸ್ಥಳೀಯ ಮಹಿಳೆಯರನ್ನು ವಿವಾಹವಾಗುವುದರೊಂದಿಗೆ ಜನ್ಮ ತಾಳಿದ ಸಮುದಾಯವು ಅರೇಬಿಯನ್ ಮೂಲವೆಂದು ಈ ಜನಾಂಗದ ಹೆಚ್ಚಿನ ಸಂಖ್ಯೆಯಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಕಾರಣ ಇವರನ್ನು ವೃತ್ತಿಯ ಆಧಾರದಲ್ಲಿ ಬ್ಯಾರಿಗಳೆಂದು ಕರೆಯಲಾಗಿದೆಯೋ? ಭಾಷೆ ಆಧಾರದಲ್ಲಿ ಇವರ ಮೂಲವನ್ನು ಬ್ಯಾರಿಗಳೆಂದು ಕರೆಯಲಾಗಿದೆಯೋ? ಅಥವಾ ಇಸ್ಲಾಂ ಧರ್ಮವನ್ನು ಸ್ವೀಕರಿಸಿದ ಇವರನ್ನು ಧರ್ಮದ ಆಧಾರದಲ್ಲಿ ಬ್ಯಾರಿಗಳೆಂದು ಕರೆಯಲಾಗಿದೆಯೋ? ಎಂಬುದರ ಕುರಿತು ಕೂಲಂಕುಷವಾಗಿ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಬ್ಯಾರಿ ಸಮುದಾಯದ ಸಾಮಾಜಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳ ಕುರಿತಾಗಿ ಹಿಂದಿನ ಸಂಪ್ರದಾಯ ಹಾಗೂ ಇಂದಿನ ಆಧುನಿಕ ಕಾಲಘಟ್ಟದಲ್ಲಿ ಬದಲಾಗುತ್ತಿರುವ ಸನ್ನಿವೇಶಗಳಿಗೆ ತಕ್ಕಂತೆ ಯಾವ ರೀತಿ ಬ್ಯಾರಿಗಳು ಬದಲಾಗುತ್ತಿದ್ದಾರೆನ್ನುವುದನ್ನು ಚರ್ಚಿಸಲಾಗಿದ್ದು ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಈ ನೆಲೆಯಲ್ಲಿ ಅವಕಾಶವಿದೆ.

ಕರ್ನಾಟಕದ ಕರಾವಳಿಯ ತುಳುನಾಡು ಹಿಂದಿನ ಕಾಲದಿಂದಲೂ ಕೋಮು ಸಾಮರಸ್ಯಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡುತ್ತಾ ಬಂದಿದೆ. ಇಲ್ಲಿ ನೆಲೆಸಿರುವ ಎಲ್ಲಾ ಸಮುದಾಯಗಳು ಪರಸ್ಪರ ಅನ್ಯೋನ್ಯತೆ ಮತ್ತು ಸೌಹಾರ್ಧತೆಯಿಂದ ಬಾಳುತ್ತಿದ್ದು ಜಿಲ್ಲೆಯ ಅಭಿವೃದ್ಧಿಗೆ ಕೋಮು ಸಂಘರ್ಷಗಳು ಮಾರಕವಾಗಿರುವುದರಿಂದ ಇಲ್ಲಿನ ಜನರಲ್ಲಿ ಇನ್ನು ಸಾಮರಸ್ಯದ ಕೊರತೆಯಿದೆ. ಇದರ ಕುರಿತಾಗಿ ಇನ್ನು ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿದೆ. ಒಂದು ಕಾಲದಲ್ಲಿ ಎಲ್ಲ ಕ್ಷೇತ್ರದಿಂದ ಹಿಂದುಳಿದು ಅಭಿವೃದ್ಧಿಯನ್ನು ಹೊಂದದೇ, ಹಿಂದೆ ಬಿದ್ದಿದ್ದ ಬ್ಯಾರಿ ಸಮುದಾಯ ಇಂದು ಎಲ್ಲ ಕ್ಷೇತ್ರಗಳಲ್ಲಿ ಮುಂದುವರಿದು ಮೇಲುಗೈ ಸಾಧಿಸಿರುವುದನ್ನು ಕಾಣಬಹುದು. ಈ ರೀತಿ ಅಭಿವೃದ್ಧಿಯ ಪಥದಲ್ಲಿ ಮುಂದುವರಿಯುತ್ತಿರುವ ಬ್ಯಾರಿ ಸಮುದಾಯಕ್ಕೆ ಇನ್ನೂ ಉನ್ನತ ಮಟ್ಟದ ಅಧ್ಯಯನದ ಅವಕಾಶಗಳಿವೆ. ಮುಂದಿನ ದಿನಗಳಲ್ಲಿ ಆಕರಗಳ ಲಭ್ಯತೆಗಳ ಆಧಾರದಲ್ಲಿ ಈ ಸಮುದಾಯದ ಬಗ್ಗೆ ಹೆಚ್ಚಿನ ಮಹತ್ವ ಸಿಗುವುದರಲ್ಲಿ ಸಂಶಯವಿಲ್ಲ.

**ಗ್ರಂಥ ಋಣ :-**


1. ಪ್ರೊ. ಬಿ.ಎಂ. ಇಚ್ಲಂಗೋಡು, *ತುಳುನಾಡಿನ ಬ್ಯಾರಿಗಳು*, ಬ್ಯಾರಿ ಪ್ರಕಾಶನ, ಬೆಂಗಳೂರು – 2011
2. ಡಾ. ವಹಾಬ್ ದೊಡ್ಡಮನೆ, *ತುಳುನಾಡಿನ ಮುಸ್ಲಿಮರು*, ಗ್ರೀನ್ ವರ್ಡ್ ಪಬ್ಲಿಕೇಶನ್, ಮಂಗಳೂರು – 2008
3. ಡಾ. ಸುಶೀಲ ಉಪಾಧ್ಯಾಯ, *ಮಾಪ್ಲಾಮಲೆಯಾಲ ಮತ್ತು ಜನಪದ ಕತೆಗಳು*, ಬ್ಯಾರಿ ಪ್ರಕಾಶನ ಬೆಂಗಳೂರು.
4. ಬ್ಯಾರಿ ಪತ್ರಿಕೆಗಳು ಮತ್ತು ಲೇಖನಗಳು,
5. ಪೆರಿಮೆ, *ಕರ್ನಾಟಕದ ಬ್ಯಾರಿ ಸಾಹಿತ್ಯ ಅಕಾಡೆಮಿ*, ಮಂಗಳೂರು –2011
6. ರಹಮತ್ ತರೀಕೆರೆ, *ಕರ್ನಾಟಕದ ಸೂಫಿಗಳು*, ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗ ಹಂಪಿ.
7. ಶಿಕ್ಷಣ ಮತ್ತು ಮುಸ್ಲಿಮರು, *ಮುಸ್ಲಿಂ ಲೇಖಕರ ಸಂಘ*, ಮಂಗಳೂರು.
8. ಅಬು ರೈಹ್ಮಾನ್ ಅಹಮ್ಮದ್ ನೂರಿ, *ಮೈಕಾಲ 1961(ಕ)*, ಮಂಗಳೂರು.
9. ಸಿ. ಗೋಪಾಲನ್ ನಾಯರ್, *ಮಾಪಿಲ್ಲಾಸ್ ಆಫ್ ಮಲಬಾರ್*, ಬಾಸೆಲ್ ಮಿಶನ್, ಮಂಗಳೂರು – 1922
10. ಡಾ.ಕೆ.ವಿ. ರಮೇಶ್, *ಎ ಹಿಸ್ಟರಿ ಆಫ್ ಸೌತ್ ಕೆನರಾ*, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ - 1970
11. ಕೆ.ಎಂ.ಫಣಿಕ್ಕರ್, *ಜಿಯೋಗ್ರಾಫಿಕಲ್ ಫ್ಯಾಕ್ಟರ್ ಇನ್ ಇಂಡಿಯನ್ ಹಿಸ್ಟರಿ* ಬಾಂಬೆ – 1948
12. ಹೆಚ್.ಎಲ್. ನಾಗೇಗೌಡ, *ಪ್ರವಾಸಿ ಕಂಡ ಇಂಡಿಯ, ಪ್ರಸಾರಂಗ ಮಾನಸ ಗಂಗೋತ್ರಿ*, ಮೈಸೂರು 1983
13. ಡಾ.ಪಿ. ಗುರುರಾಜ್ ಭಟ್, *ತುಳುನಾಡು, ಭವ್ಯವಾಣಿ ಪಬ್ಲಿಕೇಶನ್*, ಉಡುಪಿ – 1975
14. ಗಣಪತಿ ರಾವ್ ಐಗಳ್, *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ*, ಶಾರದಾ ಪ್ರೆಸ್, ಮಂಗಳೂರು 1923
15. ಡಾ. ಅಮೃತ್ ಸೋಮೇಶ್ವರ, *ಬೊಬ್ಬರ್ಯ ಪಾಡ್ದನ*, ಪಾಡ್ದನ ಸಂಪುಟ – 1997
16. ಕೇಶವ ಕುಡ್ವ, *ದಕ್ಷಿಣ ಕನ್ನಡ ಇತಿಹಾಸ* – 1948
17. ಡಾ.ಸುಶೀಲಾ ಉಪಾಧ್ಯಾಯ, *ಮಾಪ್ಲಾಸ್ ಲಾಂಗ್ವೇಜ್*, ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ.
18. ಅಭಿಶಂಕರ್, *ಸೌತ್ ಕೆನರಾ ಗಜೇಟಿಯರ್*, ಕರ್ನಾಟಕ ಸರ್ಕಾರ – 1973